ಪ್ರಕಟನೆಯ ೨೭ನೆಯ ವರ್ಷ : ೧೯೯೨

# ಸಂಕ್ರಮಣ

೨೪೧

---

ಶಿವರಾಮಯ್ಯ

ಕರ್ನಾಟಕದಲ್ಲಿ ಭಕ್ತಿಪಂಥ
ಹಾಗೂ ಕನ್ನಡ ಭಾಷಾ ಮಾಧ್ಯಮ

ಸಂಜೀವ ಕುಲಕರ್ಣಿ

ಮುಟ್ಟಿನ ಪುರಾಣ

ಪುರುಷೋತ್ತಮ ಬಿಳಿಮಲೆ

ಸಂಪಾದಕಾಯಣ

ಜಿ. ರಾಜಶೇಖರ

ಪಕ್ಷನಿಷ್ಠೆ ಮತ್ತು ಸಮಾಜವಾದ

ಶಂಕರ ಕುಕನೂರ, ಬಿ. ಪೀರ್ ಬಾಷ, ಸತ್ಯಾನಂದ ಪಾತ್ರೋಟ,
ಹೊರೆಯಾಲ ದೊರೆಸ್ವಾಮಿ, ರೇವಣ ಸಿದ್ಧ ಪೂಜಾರ, ಪ್ರಕಾಶ ಜಿ. ಕಾಳಗಿ,
ಶಿವಾನಂದ ನಾಗನೂರ ಇವರ ಕವನಗಳು

ಚಂಪಾಕಾಲಂ

ಕಲ್ಲೂರು ಲಕ್ಷ್ಮಿ ಮತ್ತು ರಾಷ್ಟ್ರಪತಿ

---

ಸಂಪುಟ ೨೭: ಸಂಚಿಕೆ ೯ ಸಪ್ಟಂಬರ್ ೧೯೯೨

# ಸಂಕ್ರಮಣ

ಸಪ್ಟೆಂಬರ್ ೧೯೯೨
ಸಂಪುಟ ೨೭ : ಸಂಚಿಕೆ ೯

ಸಂಪಾದಕಿ
ನೀಲಾ ಪಾಟೀಲ
ಸಲಹಾ ಸಂಪಾದಕ
ಚಂದ್ರಶೇಖರ ಪಾಟೀಲ



**SANKRAMANA 241**
A Monthly in Kannada
September 1992 Vol. XXVII No. 9
Sankramana Prakashana Dharwad-580 001 Phone : 40509
Printed at Chandana Mudrana, Dharwad-8
Annual Subscription : Rs. 50/-

# ಕಲ್ಲೂರು ಲಕ್ಷ್ಮಿ ಮತ್ತು ರಾಷ್ಟ್ರಪತಿ

## ಚಂದ್ರಶೇಖರ ಪಾಟೀಲ

ಇತ್ತೀಚೆಗೆ ಹಿರಿಯರೊಬ್ಬರು ತೀರಿಕೊಂಡಾಗ ಅವರ ಮಣ್ಣಿಗೆ ಹೋಗಿದ್ದೆ. ನನ್ನನ್ನು ದೂರದಿಂದಲೇ ಕಂಡ ಒಬ್ಬ ವ್ಯಕ್ತಿ ದಡಬಡಿಸಿ ಎದ್ದು ಬಂದು, "ನಮಸ್ಕಾರ್ರೀ ಸರ್" ಅಂದಿತು. ನಾನೂ ನಮಸ್ಕಾರ್ರೀ ಅಂದು ಕೈಕುಲುಕಿದೆ. ಕಣ್ಣು ಕಿವುಚಿ, ಅವನ ಮುಖ ನೋಡಿದೆ. ಅವನ ಸೈಜನ್ನು ಕಣ್ಣಿನಲ್ಲೇ ಅಳೆದೆ. ಅವನಿಗೂ ಗೊತ್ತಾಯಿತು: ನಾನು ಅವನನ್ನು ಗೊತ್ತು ಹಿಡಿದಿಲ್ಲ, ಅಂತ.

ಎಡಗೈಯಿಂದ ಚಾಳೀಸು ತಗೆದು ಕೇಳಿದ: "ಈಗ ನನ್ನ ಕಣ್ಣು ನೋಡ್ರಿ."

ಕಣ್ಣು ಅಂದರೆ ಅದೊಂದು ಪಾತಾಳಗರಡಿಯೇ. ಕಣ್ಣೊಳಗೆ ಕಣ್ಣು ಕೀಲಿಸುತ್ತಿದ್ದಂತೆ ವರ್ತಮಾನದ ಎಲ್ಲಾ ಪದರುಗಳು ಹಾಳುಗೋಡೆಯ ಹಳೇ ಮಣ್ಣಿನಂತೆ ಉದುರಿ ಬಿದ್ದು ಭೂತ ಬತ್ತಲೆಯಾಗುತ್ತದೆ. ಮೊದಲನೋಟದ ಮಿಲನದಲ್ಲಿ ಪ್ರೇಮ ಅಂಕುರವಾದರೆ, ಅನಂತರದ ನೋಟಗಳಲ್ಲಿ ಪರಸ್ಪರ ಜೀವಗಳು ಒಂದರೊಳಗೊಂದು ಆಳವಾದ ಬಾವಿ ತೋಡತೊಡಗುತ್ತವೆ.

ಅವನು ಕ್ಯಾಮರಾ ಎದುರು ಪೋಜು ಕೊಡುವವನಂತೆ ಒಂದು ಕ್ಷಣ ಭಾವಚಿತ್ರವಾಗಿ ನಿಂತೊಡನೆ, ಎಲ್ಲೋ ಒಳಗಿನ ಪೀಎನ್ ಪೆಟ್ಟಿಗೆಯ ಒಂದು ತಂತಿ ಟಣ್ ಅಂದಂತೆ, "ಹಾ... ಪೀಎನ್!" ಅಂದೆ. ಹೌದು, ಅವನು ಹದಿನಾರು-ಹದಿನೇಳು ವರ್ಷಗಳ ಹಿಂದಿನ ಪೀಎನ್‌ನ ಸ್ವಲ್ಪ ಹಿಗ್ಗಿಸಿದ, ಸ್ವಲ್ಪ ವಯಸ್ಸಾದ ಆವೃತ್ತಿಯಾಗಿದ್ದ. ಕುಲುಕಿದ್ದ ಕೈಗಳಿಗೆ ಹೊಸ ಜೀವ ಬಂದಂತಾಯಿತು.

ಅವನೊಬ್ಬ ನನ್ನ ಹಳೆಯ ವಿದ್ಯಾರ್ಥಿ. ನಾನು ಎಂ. ಎ. ಮುಗಿಸಿ ಕಾಲೇಜಿಗೆ ಲೆಕ್ಚರರ್ ಆಗಿ ಸೇರಿದ ಹೊಸದರಲ್ಲಿ ನನಗಿಂತ ಕೇವಲ ಐದಾರು ವರ್ಷ ಸಣ್ಣವನಾಗಿದ್ದ. ಕೆಲವೇ ಕೆಲವು ಆತ್ಮೀಯ ಶಿಷ್ಯರಲ್ಲಿ ಒಬ್ಬನಾಗಿದ್ದ ಅವನು ನನ್ನ ಗೆಳೆಯನೇ ಆಗುವುದು ತಡಹಿಡಿದಿರಲಿಲ್ಲ. ಹಾಗೆ ನೋಡಿದರೆ ಧಾರವಾಡದ ಕರ್ನಾಟಕ ಕಾಲೇಜಿನಂಥ ಕಾಲೇಜಿನಲ್ಲಿ ನೀವು ನಾಲ್ಕಾರು ವರ್ಷ ಕಲಿಸಿದರೆ ಸಾಕು, ದೇಶದೇಶಾಂತರದಲ್ಲಿ ನಿಮಗೆ ಈ ಮಾಜಿ ವಿದ್ಯಾರ್ಥಿಗಳು ಇದ್ದಕ್ಕಿದ್ದಂತೆ ಹೇಳದೇ ಕೇಳದೆ ಪ್ರತ್ಯಕ್ಷವಾಗುತ್ತಾರೆ. ಶಿಕ್ಷಕನಾಗಿರುವವನಿಗೆ ಇದೊಂದು ವಿಶಿಷ್ಟ ಅನುಭವ. ಕೆಲವು ಲಾಭಗಳಿದ್ದಂತೆ ಅನೇಕ ಹಾನಿಗಳೂ ಇವೆ.

ಪೀಎನ್‌ನನ್ನು ಕಂಡು ನನಗೆ ಬಹಳ ಖುಶಿಯಾಗಿತ್ತು. ತನ್ನ ಅನೇಕ ಸಹಪಾಠಿಗಳಂತೆ ತಾನೂ 'ಪ್ರೊಫೆಸರ್' ಆಗಿ, ಟೈಪೈ ಕಟಿಕೊಂಡು ಅಡ್ಡಾಡಬೇಕೆಂದಿದ್ದ ಅವನ ಹಾದಿ ಎಲ್ಲೆಲ್ಲೋ ಅಡ್ಡಹೋಗಿ ಸದ್ಯ ಶಿವಮೊಗ್ಗೆಯಲ್ಲಿ ಸರಕಾರಿ ನೌಕರಿಯೊಂದರಲ್ಲಿ ಇದ್ದ ಅವನಿಗೆ ಹಣ ಅಥವಾ ಸಾಮಾಜಿಕ ಸ್ಥಾನಮಾನದ ಯಾವ ಕೊರತೆಯೂ ಇರಲಿಲ್ಲ. ಅಕಾಡೆಮಿಯ ಕಾರ್ಯಕ್ರಮವೊಂದಕ್ಕೆ ಶಿವಮೊಗ್ಗೆಗೆ ಬರಲಿದ್ದೇನೆ ಅಂತ ಹೇಳಿದಾಗ ಅವನು ಉತ್ಸಾಹದಿಂದ, "ಬರ್ರಿ ಸ್ಯಾರ್, ಎಷ್ಟು ವರಸಾತು ನಿಮ್ಮ ಕೂಡ ಮಾತಾಡವ. ನನ್ನ ಸಲುವಾಗಿ ಸ್ಪೆಶಲ್ ಟೈಮ್ ಕೊಡ್ರಿ" ಅಂತ ಅವನು ಮತ್ತೆ ಕೈ ಕುಲುಕಿದಾಗ, ಈ ಸಂಬಂಧ ಅನ್ನೋದು ಎಷ್ಟು ವಿಚಿತ್ರ ಆಗಿರುತ್ತದಲ್ಲ! ಅನ್ನಿಸಿ, ಅದರ ಬಗ್ಗೆ ಕವನವನ್ನೋ ಕತೆಯನ್ನೋ ಬರೆಯಬೇಕು ಅನ್ನಿಸಿತ್ತು.

*

ಅಕಾಡೆಮಿಯ ಕಾರ್ಯಕ್ರಮ ಮುಗಿಸಿ, ಗೆಳೆಯರೆದುರು ಜೋಕು ಹೊಡೆದು, ಹೊಡೆಸಿಕೊಂಡು, ಅದು ಇದು ಮಾತಾಡಿ, ಬೀಳ್ಕೊಟ್ಟು, ಸದ್ದುಗದ್ದಲವಿರದ ಬಾರೊಂದರಲ್ಲಿ ನಾನು ಮತ್ತು ಪೀಎನ್ ಎದುರುಬದುರಾಗಿ ಕುಳಿತಾಗ ಮತ್ತೆ ನೆನಪುಗಳು ಭೃಂಗದ ಬೆನ್ನೇರಿ ಭೂತಕಾಲಕ್ಕೆ ಲಗ್ಗೆ ಹಾಕಿ, ಆ ದಿನಗಳ ಸಂಗಾತಿಗಳನ್ನು ಒಬ್ಬೊಬ್ಬರನ್ನಾಗಿ ನೆನೆಯುತ್ತ, ಆ ಹುಡುಗರ ಆ ಹುಡುಗಿಯರ ಕರೆಂಟ್ ಅಫೇರುಗಳನ್ನೋ ಕರೆಂಟಿಲ್ಲದ ಅಫೇರುಗಳನ್ನೋ ಮೆಲುಕು ಹಾಕುತ್ತ, ಸ್ವಲ್ಪ ರಿಟೈರಾದವರ ಮಾದರಿಯಲ್ಲಿ ಮೈಮರೆಯುತ್ತಿದ್ದಾಗ–

"ಏನು ತಗೊಂತೀರಿ ಸ್ಯಾರ್"— ಅಂದ ಪೀಎನ್.

ಇಂಗ್ಲೆಂಡು ಪಂಗ್ಲೆಂಡು ಅಡ್ಡಾಡಿ ಬಂದ ನನಗೆ ಕುಡಿಯುವುದರ ಬಗ್ಗೆ ಅಲರ್ಜಿ ಇರಲು ಸಾಧ್ಯವೇ ಇಲ್ಲ. ಇಷ್ಟೆ. ನಿಮಗೆ ತಪ್ಪೊಪ್ಪಿಗೆಯ ರೀತಿಯಲ್ಲಿ ಹೇಳಿಬಿಡುತ್ತೇನೆ. (ಎಲ್ಲ ಬರವಣಿಗೆಯೂ ಒಂದು ರೀತಿಯಲ್ಲಿ ತಪ್ಪೊಪ್ಪಿಗೆಯೇ.) 'ಕುಡಿ'ಯುವುದು ಅಂದರೆ ನನಗೆ ಅದೊಂದು 'ಅನುಭವ;' ಕೇವಲ ಚಟವಲ್ಲ. ಕುಡಿಯೋದು ಫಾರ್

ಕುಡಿಯೋದರ ಸೇಕ್ ಎಂದು ನಂಬಿರುವ ನನಗೆ ಇದನ್ನೇ ಕುಡಿಯಬೇಕು ಅದನ್ನೇ ಕುಡಿಯಬೇಕು ಎಂಬ ತಾರತಮ್ಯವಿಲ್ಲ. ಇವನಾರವ ಇವನಾರವ ಎಂದು ಲೆಕ್ಕ ಹಾಕುವ ಸ್ವಭಾವವಿಲ್ಲ. ಅಲ್ಲದೆ ನನಗೆ ಬಿಯರ್ ಒಂದು ಬಿಟ್ಟರೆ ಬೇರೆ ಡ್ರಿಂಕ್ಸ್‌ಗಳ ಸೂಕ್ಷ್ಮ ವ್ಯತ್ಯಾಸ ಗೊತ್ತಾಗುವುದಿಲ್ಲ. ಲೇಬಲ್ ನೋಡಿಯೇ ತಿಳಿಯಬೇಕು. ಬಿಯರ್ ಪತ್ತೆ ಸುಲಭ ಯಾಕಂದರೆ ಅದನ್ನು ಯಾವಾಗಲೂ ಒಂದೇ ಆಕಾರದ ಚಿಮಣಿ ಎಣ್ಣೆಯ ಬಾಟಲಿಯಲ್ಲೇ ಹಾಕಿರುತ್ತಾರೆ!

ಪೀಎನ್‌ನ ಪ್ರಶ್ನೆಗೆ, "ಯುವರ್ ವಿಶ್ " ಅಂದೆ— "ನಿನ್ನ ಭಕ್ತಿ" ಎಂಬ ರೀತಿಯಲ್ಲಿ. ಒಂದು ಕಾಲದ ಈ ಗುರುವಿನ ಆತ್ಮವನ್ನು ಪ್ರತಿಯೊಂದು ರೀತಿಯಲ್ಲೂ ತಣಿಸ ಬೇಕೆಂದಿದ್ದ ಅವನ ಹಂಬಲ ಒಡೆದುಕಾಣುವಂತಿತ್ತು.

"ಆರ್‌ಸಿ ಹೇಳೋಣಲ್ರಿ"— ಅಂದ.

ನನಗೆ ಫಜೀತಿ. ಇದೊಂದು ಹೊಸ ಶಬ್ದ ನನಗೆ. 'ಆರ್‌ಸಿ' ಅಂದರೆ ಸಾಮಾನ್ಯವಾಗಿ 'ರೆಫರನ್ಸ್ ಟು ಕಾಂಟೆಕ್ಸ್ಟ್' ಎಂದೇ ನನ್ನಂಥ ಎಲ್ಲ ಮಾಸ್ತರರ ವ್ಯಾಖ್ಯೆ. ಧಾರವಾಡದ ಕಡೆಗೆ 'ಆರ್‌ಸಿ' ಅಂದರೆ ಡಾ. ಆರ್‌ಸಿ ಹಿರೇಮಠ ಎಂಬ ಜಗತ್ ಪ್ರಸಿದ್ಧ ಹೆಸರೂ ನೆನಪಿಗೆ ಬರುತ್ತದೆ. ಆದರೆ ಅವರಿಗೂ ನಾವು ಕುಳಿತಿದ್ದ ಈ ಬಾರಿಗೂ ನೆಗಡಿ ಮೂಗಿನ ಮತ್ತು ವಾಸನೆಯ ಸಂಬಂಧವಿದ್ದಂತೆ. ನನ್ನ ಪ್ರತಿ-ಸ್ಪಂದನದ ವಿಲಂಬ ಗಮನಿಸಿದ ಪೀಎನ್, "ರಾಯಲ್ ಚಾಲೆಂಜ್ ಭಾಳ ಪ್ಲೆಜಂಟ್ ಡ್ರಿಂಕ್ ಸ್ಸರ್. ಬೇಕಾದಷ್ಟು ಕುಡೀರಿ ಏನೂ ಆಗೋದಿಲ್ಲ." ಅಂತಂದಾಗ, "ಹೌದು ಹೌದು, ಇಂಗ್ಲಂಡ್‌ದಾಗ ನಾನು ಆವಾಗಿವಾಗ ಅದನ್ನs ಕುಡೀತಿದ್ದೆ." ಎಂದು ಅಷ್ಟೇನೂ ರಾಷ್ಟ್ರಘಾತಕವಲ್ಲದ ಒಂದು ವೈಟ್ ಲೈ (ಬಿಳಿಯ ಸುಳ್ಳ)ನ್ನು ಉರುಳಿಸಿ, "ಆರ್‌ಸಿ ಅಂದರ ರಾಯಲ್ ಚಾಲೆಂಜ್..." ಅಂತ ಬಾಯಿಪಾಠ ಮಾಡತೊಡಗಿದೆ.

ಪೀ ಎನ್ ಸುಳ್ಳು ಹೇಳಿರಲಿಲ್ಲ. ಸುಳ್ಳು ಹೇಳಲು ಕಾರಣವೂ ಇರಲಿಲ್ಲ. ಹಾಗೆ ನೋಡಿದರೆ ನಾನು, ಸುಳ್ಳು ಹೇಳುವ ಕಲೆಯ ಮೂಲಕವೇ ಒಂದು ಸೃಜನಶೀಲ ಪ್ರತಿಭೆಯನ್ನು ಗುರುತಿಸುವವ. ಕಲ್ಪನಾಶಕ್ತಿ ಇಲ್ಲದವರು ಮಾತ್ರ ಸತ್ಯ ಹೇಳುತ್ತಾರೆ. ಅದೊಂದು ಕಾರಣಕ್ಕೇ ಅವರು ಮಹಾತ್ಮರಾಗಿಯೂ ಬಿಡುತ್ತಾರೆ. ಹೀಗೆಂದರೆ ನಾನು ಸತ್ಯದ ದ್ವೇಷಿಯೇನೂ ಅಲ್ಲ. ಅದಕ್ಕೂ ನನ್ನ ಶಬ್ದಕೋಶದಲ್ಲಿ ತಕ್ಕ ಸ್ಥಾನಮಾನವಿದೆ. ಆದಕ್ಕೇ ನನಗೆ ಕೇವಲ ಇದ್ದವರಿಗೆ ನಾನು ಹೇಳುವುದು: "ಸಣ್ಣ ಸಣ್ಣ ವಿಷಯಕ್ಕೆ ಸುಳ್ಳು ಹೇಳಬೇಡಿರಿ." . ಇರಲಿ.

ರಾಯಲ್ ಚಾಲೆಂಜ್ ಹನಿ ಹನಿಯಾಗಿ ಮೈಯಲ್ಲಿ ಸಲೈನ್ ಸೇರಿದಂತೆ ಸೇರಿದಾಗ ಕಣ್ಣುಗಳ ಮೇಲೆ, ಯವನ ಸುಂದರಿಯ ಮುಖ ಆವರಿಸುವ ಮಸ್ಲಿನ್ ಪರದೆಯಂತೆ, ಒಂದು ಬಗೆಯ ಮಂಜು ಮುಸುಕುತ್ತದೆ. ಗಂಟಲೊಳಗಿನ ಧ್ವನಿ ಪಟಲ

ಗಳು ಮೃದುವಾಗುತ್ತ, ಹೊರಬಂದ ಮಾತುಗಳೆಲ್ಲ, ನನಗೇ ಆಶ್ಚರ್ಯವಾಗುವಂತೆ, ನಾನು ಕಾಲು ಶತಮಾನದ ಹಿಂದೆ ಬರೆದ ಪ್ರೇಮ ಕವನಗಳ ಸಾಲುಗಳಂತೆ, ಹಗುರಾಗಿ ಸೆರಗು ಸರಿಮಾಡಿಕೊಳ್ಳುವ ಆ ಕ್ಲಾಸ್‌ಮೇಟಿನಂತೆ ತೋರುತ್ತವೆ. "ಪೀ ಎನ್, ಪೀ ಎನ್, ನಾನು ಇದಕ್ಕೆ ಇನ್ನು ಮೇಲೆ ಆರ್‌ಸಿ ಅನ್ನುವುದಿಲ್ಲ; ಪೀ ಎನ್ ಅನ್ನುತ್ತೇನೆ..." ಎಂದು, ಕಂಡ ವಸ್ತುವಿಗೆ ಹೊಸ ಹೆಸರಿಡುವ ಆ್ಯಡಮ್‌ನ ಮೊದಲ ಪುಳಕವನ್ನು...

*

"ಇದೇನು! ಎಲ್ಲಿ ಕಲ್ಲೂರು ಲಕ್ಷ್ಮಿ, ಎಲ್ಲಿ ರಾಷ್ಟ್ರಪತಿ, ಎಲ್ಲಿ ಪೀ ಎನ್, ಎಲ್ಲಿ ಆರ್‌ಸಿ..."-ಅಂತ ನೀವು, ಅರ್ಥದ ಎಳೆಯೇ ಸಿಗದ ನವ್ಯ ಕವನದ ರಿವ್ಯೂ ಬರೆಯ ಹೊರಟ ವಿಮರ್ಶಕನಂತೆ, ಒದ್ದಾಡುತ್ತಿರಬಹುದಲ್ಲವೇ ? ಒದ್ದಾಡಿರಿ.

ಇದ್ದಕ್ಕಿದ್ದಂತೆ-ಸಡನ್ನಾಗಿ, ಅನ್ನುತ್ತಾರಲ್ಲ ಹಾಗೆ—ನಮ್ಮ ಸ್ವಗತವೂ ಅಲ್ಲದ ಸಂಭಾಷಣೆಯೂ ಅಲ್ಲದ ಮಾತುಗಳ ನಡುವೆ ಬನ್ನಂಜೆ ಗೋವಿಂದಾಚಾರ್ಯರ ಪ್ರವೇಶವಾಗಿ ಬಿಟ್ಟಿತು. ಅವರು ಆಗ ಶಿವಮೊಗ್ಗೆಯಲ್ಲಿ ಒಂದು ಭಾಷಣ ಸಪ್ತಾಹ ಹಮ್ಮಿಕೊಂಡು ಸಂಜೆ ಅರವತ್ತು ಮಿನಿಟೆಂದರೆ ಅರವತ್ತು ಮಿನಿಟು ಎದುರಿಗೆ ಬಾಯ್ತೆರೆದು ಕುಂತ ಭಾವುಕರನ್ನು ಕುರಿತು ಭಗವದ್‌ಗೀತೆಯ ಬಗ್ಗೆಯೋ ಭಗವಾದ್ಘಂಡಾದ ಬಗ್ಗೆಯೋ ಭಾಷಣ ಬಿಗಿಯುತ್ತಿದ್ದರಂತೆ. ನಮ್ಮ ರಾಯಲ್ ಚಾಲೇಜಿನ ರಮ್ಯಲೋಕ ನಿರ್ಮಾಣವಾಗುವ ಒಂದು ಗಂಟೆ ಮುಂಚೆ ಮಾತ್ರ ನಮ್ಮ ಪೀ ಎನ್ (ಪ್ರತಿದಿನದ ಅವನ ರೀತಿಯಂತೆ) ಬನ್ನಂಜೆಯವರ ಮಧುಪಾತ್ರೆಯಲ್ಲಿ ಭಕ್ತಿಯಿಂದ ಮಿಂದು ಬಂದವನಾಗಿದ್ದ.

ಬನ್ನಂಜೆಯವರ ರಂಗಪ್ರವೇಶವಾದ ನಂತರ ಯಥಾ ಪ್ರಕಾರ ದೇವರು, ದಿಂಡರು, ಕರ್ಮ, ಹಣೇಬರಹ, ಅವತಾರ, ಪುನರ್ಜನ್ಮ, ಪಾಪ, ಪುಣ್ಯ, ದೆವ್ವ, ಭೂತ, ಪಿಶಾಚಿಗಳು ಉಧೋ ಉಧೋ ಅನ್ನುತ್ತ ಮೆರವಣಿಗೆ ತಗೆಯಲೇಬೇಕಲ್ಲವೇ?

ಮುಂದಿನ ಒಂದು ತಾಸು ನಮ್ಮ ಮುಂಜಿನ ಲೋಕದಲ್ಲಿ-- ಆರ್ನಲ್ಡ್ ಕವಿ ಹೇಳುವ ignorant armies clash by night ರೀತಿಯಲ್ಲಿ— ವಾದ ವಿವಾದ ಪ್ರತಿವಾದ ಖಂಡನೆ ಮಂಡನೆ ಮುಂಡನೆ... ಇವೇ. ನಮ್ಮ ಪೀಎನ್ ಗೋವಿಂದಾಚಾರ್ಯರ ಪರಮ ಭಕ್ತ; ಮತ್ತು ನನ್ನ ಪರಮ ಶಿಷ್ಯ. ಭಕ್ತ ಮತ್ತು ಶಿಷ್ಯರ ನಡುವೆ ಭಯಂಕರ ಕಾಳಗವೇ ಏರ್ಪಟ್ಟು, ಕುಡಿದಾಗ ಸತ್ಯಗಳು ಹೊರಬೀಳುತ್ತವೆ ಎಂಬ ನನ್ನ ನಂಬಿಗೆ ದೃಢಪಟ್ಟು, ಕುಡಿತದ ಮಹಿಮೆಯನ್ನು ಕ್ಷಣಕ್ಷಣಕ್ಕೆ ಹೆಚ್ಚಿಸುವಂತೆ ಇತಿಹಾಸ ಚಕ್ರ ತಿರುಗತೊಡಗಿತು.

ಲೆನಿನ್ ಗಡ್ಡದ ಬನ್ನಂಜೆಯವರು ಪ್ರಚಂಡ ವಾಗ್ಮಿ ಎಂದು ಹೆಸರು ಗಳಿಸಿದವರು. ರಶಿಯಾ ದೇಶದಲ್ಲಿ ಲೆನಿನ್ ಮೂರ್ತಿಯೇ ಜಾಹೀರ ಲಿಲಾವಿಗೆ ಹಚ್ಚಲ್ಪಟ್ಟಿದ್ದರೂ ನಮ್ಮ ಬನ್ನಂಜೆಯವರ ಗಡ್ಡ ಮಾತ್ರ ಅವರ ಗದ್ದದ ಕೆಳಗೆ ಕುಣಿದಾಡುವ ರೋಮಾಂಚಕತೆಯಲ್ಲಿ ಮಾತ್ರ ಯಾವ ವ್ಯತ್ಯಾಸವೂ ಉಂಟಾದಂತಿಲ್ಲ. ಕನ್ನಡ, ಸಂಸ್ಕೃತ, ಇಂಗ್ಲಿಷ ಭಾಷೆಗಳ ಭಂಡಾರದಿಂದ ಕೊಟೇಶನ್ನುಗಳನ್ನು ಹಿರಿಹಿರಿದು ಸಭಿಕರನ್ನು ದಿಙ್ಮೂಢರನ್ನಾಗಿ ಮಾಡುವ ಗೋವಿಂದಾಚಾರ್ಯರು ಜನಿವಾರ ಧರಿಸಿದ ಕಂಪ್ಯೂಟರಿನಂತೆ ಅಧಿಕಾರವಾಣಿಯಿಂದ ಮಾತಾಡುತ್ತ, ಇಂಡಿಯಾ ದೇಶದ ಕರ್ನಾಟಕವೆಂಬ ರಾಜ್ಯದಲ್ಲಿ ವೈದಿಕ ಸಾಮ್ರಾಜ್ಯದ ಸಾಂಸ್ಕೃತಿಕ ರಾಯಭಾರಿಯಾಗಿ (ಮತ್ತು ಸ್ವಲ್ಪಮಟ್ಟಿಗೆ ಉಪಜೀವನಕ್ಕಾಗಿ) ಊರೂರು ಅಲೆಯುವ ದಾಸಯ್ಯನಾದ ಸುದ್ದಿ ನನಗೂ ಬಡಿದಿತ್ತು.

ನಮ್ಮ ಪೀಎನ್ ಸನ್ಮೋಹಿನಿಗೊಳಗಾಗಿ ದೇಹ ಮತ್ತು ಆತ್ಮದ ಬಗ್ಗೆ; ಆತ್ಮವು ತನ್ನ ಡ್ಯೂಟಿ ಮುಗಿದ ಮೇಲೆ ಮೆಕ್ಯಾನಿಕ್ ಒಂದು ಡ್ರೆಸ್ ಬಿಟ್ಟು ಮತ್ತೊಂದು ಡ್ರೆಸ್ ಹಾಕಿಕೊಳ್ಳುವಂತೆ ದೇಹಗಳನ್ನು ಬದಲಿಸುತ್ತ ಜನ್ಮಜನ್ಮಾಂತರಗಳ ಟೂರಿಸ್ಟ್ ಬಸ್ಸು ಹತ್ತುವ ಬಗ್ಗೆ; ಪರಮಾತ್ಮನು ತನ್ನ ಆಫೀಸಿನಲ್ಲಿ ಕುಳಿತೇ ಎಲ್ಲವನ್ನೂ ರಿಮೋಟ್ ಕಂಟ್ರೋಲ್ ಮಾಡುವ ಬಗ್ಗೆ; ಭೂಮಿಯ ಮೇಲೆ ಅವನ ಏಜಂಟರಾದ ಬ್ರಾಹ್ಮಣರು ಇಡೀ ಜನಸಂಖ್ಯೆಗೆ ಪಾಪ-ಪುಣ್ಯಗಳ ದಾರಿ ತೋರುತ್ತಿರುವ ಬಗ್ಗೆ... ಮಾತಾಡುತ್ತ, ಯಾವುದೋ ಫಾರೆನ್ ಪಂಡಿತ ಮೂಡೀ ಎಂಬವನ ಮತ್ತು ಸ್ಥಳೀಯ ಪ್ರತಿಭೆಯಾದ ಭೈರಪ್ಪನಂಥವರ ಉವಾಚಗಳನ್ನು ಉದ್ಧರಿಸುತ್ತ, ಅಂತೂ ಇಂತೂ ನನ್ನಂಥ ನಾಸ್ತಿಕ ರಾಕ್ಷಸನನ್ನು ದರದರ ಎಳಕೊಂಡು ಹೋಗಿ ದೇವತಾಸ್ವರೂಪಿ ಗೋವಿಂದಾಚಾರ್ಯರ ಗೋಮಾತೆಗಳ ಕೊಂಡವಾಡದಲ್ಲಿ ಕೂಡಹಾಕುವ ಅಪ್ರಜ್ಞಾ ಪೂರ್ವಕ ಸನ್ನಾಹದಲ್ಲಿದ್ದಾಗ—

ನಾನು ರಾಯಲ್ ಚಾಲೆಂಜಿನ ಚಾಳೀಸಿನ ಮೂಲಕ ಪೀಎನ್‌ನನ್ನು ಪರೀಕ್ಷಿಸುತ್ತ ಇವನು ಸತ್ಯವನ್ನೇ ನುಡಿಯುತ್ತಿರಬಹುದೇ ಎಂಬ ಸಂಶಯ ಕಾಡತೊಡಗಿತು. ಹಿಂದೊಮ್ಮೆ, ಇಂಥದೇ ಒಂದು ವಾತಾವರಣದಲ್ಲಿ (ಯಾವುದೋ ಕಾಲ ಯಾವುದೋ ದೇಶ...ಕುಡಿದಾಗ ನೆನಪಿರುವುದಿಲ್ಲ.) ನನ್ನ ಹಿರಿಯ ಸ್ನೇಹಿತ ರಾಮಚಂದ್ರ ಶರ್ಮರನ್ನು ಕೇಳಿದ ಪ್ರಶ್ನೆ ನೆನಪಾಯಿತು.

"ಮನುಷ್ಯ ಕುಡಿದಾಗ ಖರೆ ಮಾತಾಡುತ್ತಾನಂತೆ, ನಿಜವೇ?" ಎಂಬ ನನ್ನ ಪ್ರಶ್ನೆಗೆ ಶರ್ಮರು, ಹೊಸದಾಗಿ ಕ್ಲಾಸು ಸೇರಿದ ವಿದ್ಯಾರ್ಥಿಯನ್ನು ಕರುಣೆಯಿಂದ ಅರ್ಧನಿಮೀಲಿತ ನೇತ್ರರಾಗಿ ನೋಡಿ ತಥಾಗತನಂತೆ, Sometimes ಅಂತ

ಉತ್ತರ ಕೊಟ್ಟಿದ್ದರು. ಶರ್ಮರು ಮತ್ತು ಶರ್ಮರಂಥವರು ಕುಡಿಯದಿದ್ದಾಗಲೂ ಕೂಡ ಖರೇ ಮಾತಾಡುವುದು ಸಮ್‌ಟೈಮ್ಸ್‌ನೇ ಅಂತ ನನಗೆ ಅರಿವು ಮೂಡಿದ್ದು ಅನಂತರವೇ. ಆದಿರಲಿ.

ಪೀಎನ್‌ನನ್ನು ತಡೆಯುವ ಶಕ್ತಿ ಯಾವುದೂ ಇರಲಿಲ್ಲ ಈಗ. ತೇಜಸ್ವಿಯವರ ಒಂದು ಕತೆಯೊಳಗಿನ ಮಾರದ ದಿಮ್ಮಿಯಂತೆ ಅವನ ಮಾತು ಅಡಿಗರ ಯಕ್ಷಗಾನ ಶೈಲಿಯ ಕಾವ್ಯವಾಗಿ ಧುಮುಕುತ್ತಿತ್ತು. ಅಗ ಮೈತಳೆದದ್ದು ಕಲ್ಲೂರಿನ ಲಕ್ಷ್ಮಿಯ ಕತೆ.

ಅದು ಕಲ್ಲೂರೋ ಕೊಲ್ಲೂರೋ ಸರಿಯಾಗಿ ತಿಳಿಯಲಿಲ್ಲ. ರಾಯಚೂರ ಹತ್ತಿರದ ಒಂದು ಕುಗ್ರಾಮ. "ಕಲ್ಲು" ಮತ್ತು "ಕೊಲ್ಲು" ಒಡಹುಟ್ಟಿದ ಶಬ್ದಗಳಾಗಿರುವದರಿಂದ ಏನು ಅಂದರೂ ನಡೆದೀತು. ಅಲ್ಲಿಯ ಒಬ್ಬ ಆಚಾರ್ಯರು (ಅದೇ ನಮ್ಮ ಕನ್ನಡ ಶಾಲೆಯ ಪಠ್ಯ ಪುಸ್ತಕಗಳ 'ಬಡ ಬ್ರಾಹ್ಮಣ'!) ಕೊಲ್ಲಾಪುರದ ಮಹಾಲಕ್ಷ್ಮಿಯ ಪರಮ ಭಕ್ತರಾಗಿದ್ದುಕೊಂಡು ಪ್ರತಿವರ್ಷವೂ ಅಲ್ಲಿಗೆ ಯಾತ್ರೆ ಕೈಗೊಳ್ಳುತ್ತಿರಲು, ಮುಪ್ಪಿನ ಕಾಲದಲ್ಲಿ ಇದು ಅಪ್ರಟ ಅಸಾಧ್ಯವಾಗಿರಲು, ಒಂದಿರುಳು ಕನಸಿನಲಿ ಅವಳೇ ಸರ್ವಾಲಂಕಾರ ಭೂಷಿತೆಯಾಗಿ ಬಂದು "ಭಕ್ತಾ! ನೀನೇಕೆ ಗಾಡೀ ಖರ್ಚು ಮಾಡಿಕೊಂಡು ಕೈಕಾಲು ಊನ ಮಾಡಿಕೊಂಡು ಬರುತ್ತೀ? ನಾನೇ ನಿನ್ನ ಬಳಿ ಬರುತ್ತೇನೆ." ಎಂದಳಂತೆ. ಮಾರುದಿನ ಹೊಲದಲ್ಲಿ ಕುಂಟಿ ಹೂಡಿದಾಗ (ಆ ಬ್ರಾಹ್ಮಣನಿಗೆ ಕುಂಟಿ-ಕೂರಿಗಿ ಗೊತ್ತೇ?-ಅಂತ ನಾನು ಕೇಳಲಿಲ್ಲ) ದೇವಿಯ ಪ್ರತಿಮೆಯೊಂದು ಅದಕ್ಕೆ ಅಟೆಯಿತಂತೆ. ಅದನ್ನೇ ಪ್ರತಿಷ್ಠಾಪಿಸಿ ದೇವಾಲಯ ಕಟ್ಟಿದರಂತೆ. ಅವತ್ತಿನಿಂದ ಕೊಲ್ಲಾಪುರದ ಮಹಾಲಕ್ಷ್ಮಿಯ ಸಿಂಪ್ಲಿಫೈಡ್ ಅಂಡ್ ಅಬ್ರಿಜ್ಡ್ ಎಡಿಶನ್ನಾಗಿ ಕಲ್ಲೂರಿನ ಈ (ಅಲ್ಪ) ಲಕ್ಷ್ಮಿ ಸುತ್ತಲಿನ ಹತ್ತು ದಿಕ್ಕಿನಲ್ಲಿ ಭಕ್ತರ ಅಭೀಷ್ಟಗಳನ್ನು-ಅವರು ಪೂಜಾರಿ ಬ್ರಾಹ್ಮಣರ ಅಭೀಷ್ಟಗಳನ್ನು ತೃಪ್ತಿ ಮಾಡಿದ ನಂತರ-ಈಡೇರಿಸುತ್ತ ಬಂದಿದ್ದಾಳಂತೆ!

ಪೀಎನ್ ಹೇಳುತ್ತಲೇ ಇದ್ದ. ಅವನೊಂದು ಮನೆ ಖರೀದಿಸಿದ್ದ. ಅದನ್ನು ನೆಲಸಮ ಮಾಡಿ ಹೊಸ ಮನೆ ಕಟ್ಟಬೇಕೆಂದಿದ್ದ. ಮನೆ ಮಂದಿಯೆಲ್ಲ ಹುಚ್ಚ ಅಂದರು. ಮೂರ್ಖ ಅಂದರು ಪೀಎನ್ ಜಗ್ಗಲಿಲ್ಲ ಹೆಂಡತಿಯೊಂದಿಗೆ ಟ್ಯಾಕ್ಸಿ ಮಾಡಿಕೊಂಡು ಕಲ್ಲೂರಿಗೆ ಹೋದ. ಪೂಜಾರಿಗಳನ್ನು ತೃಪ್ತಿಪಡಿಸಿದ. ಗುಡಿಯಲ್ಲಿ ಟೆಂಗಿನಕಾಯಿ ಕಟ್ಟಿದ. ಹರಕೆ ಹೊತ್ತ. ಅದೋ, ನೋಡಿರಿ. ಹಳೇಮನೆಯ ಜಾಗದಲ್ಲಿ ಹೊಸ ಮನೆ ಉದ್ಭವಿಸಿದೆ. ಅದಕ್ಕೀಗ ತಿಂಗಳಿಗೆ ಒಂಬತ್ತು ನೂರು ರೂ. ಬಾಡಿಗೆ. ಮೂರ್ಖ ಅಂದವರೇ ಮೂರ್ಖರಾದರು. ಹುಚ್ಚ ಅಂದವರೇ ಹುಚ್ಚರಾದರು.

"ಇದಕ್ಕೇನಂತೀರಿ ಸರ್?"—ಇದು ಅವನ ಚಾಲೆಂಜ್.

ಪೀಎನ್‌ನ ಪ್ರಶ್ನೆ ನನಗೆ ಪಾತಾಳದಲ್ಲಿ ಕರಗಿ ಹೋಗುತ್ತಿದ್ದವನ ಕುತ್ತಿಗೆಗೆ ಮೇಲಿನಿಂದ ಯಾರೋ ಒಗೆದ ನೇಣಿನ ಹಗ್ಗದಂತೆ ತೋರಿತು. ನಾನೇನೂ ಹೇಳುವಂತಿರಲಿಲ್ಲ. ಬನ್ನಂಜೆ ಎಂಬ ಪಂಜುರ್ಲಿ ಭೂತವನ್ನು ಕಂಡ ಚೋಮನಾಗಿದ್ದೆ ನಾನು. ಈಗ ನನ್ನ ಪಾಳಿ.

ಹೇಳಿದೆ: "ನೋಡು ಪೀಎನ್, ನಿನ್ನ ಮಾತು ಸತ್ಯ ಅಂತ ನಾ ಸಂಪೂರ್ಣ ನಂಬೇನಿ. ನಾನು ಭಾರತದ ಒಬ್ಬ ನಾಗರಿಕ. ನನಗ ೩೫ ವರ್ಷ ಪೂರ್ತ್ಯಾವು. ನಂದು ಕ್ರಿಮಿನಲ್ ರೆಕಾರ್ಡು ಇಲ್ಲ. ಎಮರ್ಜನ್ಸಿಯೊಳಗ ಜೇಲಿಗೆ ಹೋಗಿದ್ದು ಕ್ರಿಮಿನಲ್ ಅಂತ ಅಲ್ಲ ನನ್ನ ಮನಿ ಎದುರಿಗೇ ಮೆಂಟಲ್ ಹಾಸ್ಪಿಟಲ್ ಇದ್ರೂ ಅಲ್ಲಿ ಒಳಗ ಹೋಗೋ ಪ್ರಸಂಗ ಬಂದಿಲ್ಲ .."

ಚಾಳೀಸು ತೆಗೆದಿಟ್ಟ ಪೀಎನ್ ಕುತೂಹಲದಿಂದ ನನ್ನ ಮಾತನ್ನೆ ಫಾಲೋ ಮಾಡುತ್ತಿದ್ದ.

"ನೀ ಮುಂದಿನ ಸಲ ಧಾರವಾಡಕ್ಕ ಬಂದಾಗ ಟ್ಯಾಕ್ಸಿ ತಗೊಂಡು ಕಲ್ಲೂರಿಗೆ ಹೋಗೋಣ. ಇಡೀ ಆಯುಷ್ಯದಾಗ ಇನ್ನೊಮ್ಮೆ 'ಭೋಜನ' ಅಂದಿರಬಾರ್ದು, ಅಂಥಾ ಭೋಜನಾ ಅಲ್ಲೀ ಬ್ರಾಹ್ಮಣರಿಗೆ ಮಾಡಿಸ್ತೀನಿ. ಟೆಂಗಿನಕಾಯಿ ಯಾಕ, ಟೆಂಗಿನ ಮರಾನss ಗುಡ್ಯಾಗ ಇಳೇಬಿಡ್ತೀನಿ. ಭಕ್ತಿಯಿಂದ ಹರಕೆ ಹೊರ್ತೀನಿ..."

"ಏನಾಗೇತ್ರೀ ಸರ್..."—ಪೀ ಎನ್ ಪ್ರಶ್ನೆ. ದನಿಯಲ್ಲಿ ದುಗುಡ.

ಈಗಿರುವ ರಾಷ್ಟ್ರಪತಿ ಡಾ. ಶಂಕರ ದಯಾಳ ಶರ್ಮಾ ಮೊನ್ನೆ ಮೊನ್ನೆ ತಿರುಪತಿಗೆ ಹೋಗಿ ತಲೆ ಬೋಳಿಸಿಕೊಂಡು ಬಂದವರು. ಬಂಕಣಗಾಲಿನಿಂದ ಸರಿಯಾಗಿ ನಡೆಯಲಿಕ್ಕೂ ಬಾರದೆ, ಒಮ್ಮೊಮ್ಮೆ ಟಿಂಗ್ ಟಿಂಗ್ ಪಾಪಾನಂತೆ ಉರುಳಿಬೀಳುವ ಈ ರಾಷ್ಟ್ರಪತಿಗಿಂತ ನಾನೇನು ಕಡಿಮೆ ? ನಾನೂ ಅವರಿಗಿಂತ ಚೆನ್ನಾಗಿ ಇಂಗ್ಲಿಷ್ ಮಾತಾಡಬಲ್ಲೆ.

ತಾತ್ಪರ್ಯ: ಮುಂದಿನ ರಾಷ್ಟ್ರಪತಿ ಚುನಾವಣೆ ಕಾಲಕ್ಕೆ ನಾನೂ ನಾಮಿನೇಶನ್ ಫೈಲ್ ಮಾಡುವೆ. ಕಲ್ಲೂರು ಲಕ್ಷ್ಮಿಯ ಜವಾಬ್ದಾರಿ ಅಂದರೆ... ಇಂಗ್ಲಿಷಿನಲ್ಲಿ ಮುಂದುವರಿಸಿದೆ: She should see to it that I shall be the next President of India..."

ಪೀ ಎನ್ ಗಾಬರಿಯಾಗತೊಡಗಿದ್ದ. "ಅಲ್ರೀ ಸsರ್, ನೀವು ಎಂ ಎಲ್ ಎ ಆಗಿಲ್ಲ ಎಂಪಿ ಆಗಿಲ್ಲ ಸಿ ಎಂ ಆಗಿಲ್ಲ..." "ನೋನೋನೋ.. ರಾಷ್ಟ್ರಪತಿ ಆಗಲಿಕ್ಕೆ ಅವೆಲ್ಲಾ ಬೇಕಾಗಿಲ್ಲ. ನಿನ್ನ ಕಲ್ಲೂರು ಲಕ್ಷ್ಮಿ ಖರೇನs ಆಗಿದ್ದರ I should be the next..."

ಈಗ ಕಲ್ಲೂರು ಲಕ್ಷ್ಮಿಯ ಅಳಿವು ಉಳಿವು ತನ್ನ ಸ್ವಂತದ ಜವಾಬ್ದಾರಿ ಎಂದರಿತ ಪೀ ಎನ್ ಒಂದು ಬಗೆಯ ಕಾಂಪ್ರಮೈಜ್‌ಗೆ ಮುಂದಾದಂತಿತ್ತು. ಕುಗ್ರಾಮದ ಬಡ ಪಾಯಿ ಕಲ್ಲೂರು ಲಕ್ಷ್ಮಿಗೆ ತನ್ನ ಒಂದು ಕಾಲದ ಮಾಸ್ತರನಿಂದ ಇಂಥ ರಾಯಲ್ ಚಾಲೆಂಜ್ ಬಂದೀತೆಂದು ಅವನು ಲೆಕ್ಕ ಹಾಕಿರಲಿಲ್ಲ. "ಅಲೀ ಸsರ್, ಕೇಳೋದ ರೊಳಗೂ ಒಂದು ಮಿತಿ ಬೇಕ್ರಿ ಈಗ ರೀಡರ್ ಅದೀರಿ. ಪ್ರೊಫೆಸರ್ ಮಾಡು ಅಂತ ಕೇಳ್ರಿ. ಹೆಡ್‌ಶಿಪ್ ಕೇಳ್ರಿ ಬೇಕಾದರ ವಿ. ಸಿ ಪೋಸ್ಟ್ ಕೇಳ್ರಿ. ಮನಿ ಕೇಳ್ರಿ. ಪ್ಲಾಟ್ ಕೇಳ್ರಿ.... ಎಲ್ಲಾ ಬಿಟ್ಟು ಒಮ್ಮೆಗೆ ರಾಷ್ಟ್ರಪತಿ ಪಟ್ಟ ಕೇಳ್ತೀನಿ ಅಂದ್ರ ?" "ಅಂದ್ರೆ...ನಿಮ್ಮ ಕಲ್ಲೂರ ಬಾಯಿಗೆ ಇವೆಲ್ಲ ನೀಗೋದಿಲ್ಲೇನು?"

"ಹಂಗಲ್ರೀ ಸsರ್. ಆಕೀ ಮನಸಿನ್ಯಾಗ ಮುಂದಿನ ರಾಷ್ಟ್ರಪತಿ ಬ್ಯಾರೇ ಯಾರೋ ಆಗಬೇಕು ಅಂತ ಇದ್ರ ನಿಮ್ಮನ್ನ ಹ್ಯಾಂಗ ರಾಷ್ಟ್ರಪತಿ ಮಾಡಾಕ ಆಗ್ತತಿ?" ಕಲ್ಲೂರ ಲಕ್ಷ್ಮಿಯ ಪಿ. ಎ. ರೀತಿಯಲ್ಲಿ ಮಾತಾಡುತ್ತಿದ್ದ ಪೀ ಎನ್, "ಬೇಕಾದ್ರ ಮುಂದಿನ ಇಲೆಕ್ಷನ್ನಿನಾಗ ಧಾರವಾಡದ ಎಂಎಲ್‌ಎ ಮಾಡು ಅಂತ ಆಕೀಗ ಹರಕೆ ಹೊರ್ರಿ. ನಾವೂ ಬರ್ತವಿ ಕ್ಯಾನವಾಸಿಗೆ. ನನ್ನ ಎಲ್ಲಾ ಫ್ರೆಂಡ್ಸ್‌ಗೂ ಹೇಳ್ತೀನಿ. ನಾಕಾರು ವೋಟು ನಮ್ಮಿಂದನೂ ನಿಮಗ ಬರಬಹುದು. ನೋಡೋಣು."

"ಅಲ್ಲಪಾ, ನಾನೂ ನೀನೂ ನಿನ್ನ ಕ್ಲಾಸ್‌ಮೇಟ್ಸೂ ಎಲ್ಲಾ ಪ್ರಯತ್ನ ಮಾಡಿ ನಾನು ಎಂಎಲ್‌ಎ ಆಗೋದಾದ್ರ, ನಿನ್ನ ಕಲ್ಲೂರು ಲಕ್ಷ್ಮಿಗೆ ಅದರ ಕ್ರೆಡಿಟ್ ಯಾಕೆ ಕೊಡಬೇಕು ? ಆಕೀಗೆ ಟೆಂಗಿನಕಾಯಿ ಯಾಕ ಕಟ್ಟಬೇಕು? ಆ ಭಟ್ಟ ರಿಗೆ ಪುಕಟ ಕೂಳು ಯಾಕ ಹಾಕಬೇಕು?"

ನಿರುತ್ತರನಾದ ಪೀಎನ್ : "ನಾ ನಾಳೆ ಸಂಜೆ ಬನ್ನಂಜೆ ಗೋವಿಂದಾಚಾ ರ್ಯರನ್ನ ಭೆಟ್ಟಿ ಆಗಿ, ಅವರು ಉತ್ತರಾ ಹೇಳಿದರ ನಿಮಗ ಪತ್ರಾ ಬರೀ ತೇನಿ."

ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ—ಎಂಬ ಭಂಗಿಯಲ್ಲಿ ನಿಂತಿರ ಅಥವಾ ಕುಂತಿರಬಹುದಾದ ಬನ್ನಂಜೆ ನನ್ನ ಮುಗ್ಧ ಶಿಷ್ಯನಿಗೆ ಉತ್ತರ ಹೇಳಿದರೋ, ಅಥವಾ ಮುಂದಿನ "ಅವತಾರ" ಧರಿಸಿ ಬಂದಾಗ ಹೇಳುತ್ತೇನೆ ಅಂತ ಅಂತರ್ಧಾನರಾದರೋ ಇನ್ನೂ ಗೊತ್ತಾಗಿಲ್ಲ.

ಪೀಎನ್‌ನ ಪತ್ರದ ಹಾದಿ ಕಾಯುತ್ತಿರುವೆ. ●

# ಕರ್ನಾಟಕದಲ್ಲಿ ಭಕ್ತಿಪಂಥ ಹಾಗೂ ಕನ್ನಡ ಭಾಷಾ ಮಾಧ್ಯಮ

ಶಿವರಾಮಯ್ಯ

(ವೈದಿಕ ಭಕ್ತಿ ಪಂಥಗಳು ಸಂಸ್ಕೃತವನ್ನು ಕೈಬಿಟ್ಟದ್ದು ಕೈತಪ್ಪಿ ಹೋಗುತ್ತಿದ್ದ ಕೆಳವರ್ಗದ ಸಂಸ್ಕೃತಿಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವ Strategy ಯಾಗಿ ಮಾತ್ರ; ಅದು ಪ್ರತಿ ಸಂಸ್ಕೃತಿ ಮೊಳೆಯುವ ಸಾಧ್ಯತೆಯನ್ನು ನಾಶಮಾಡುವ ತಂತ್ರವಾಗಿತ್ತು)

[ಡಾ॥ ರಹಮತ್ ತರೀಕೆರೆ: ಪಾವಿತ್ರ್ಯನಾಶವೂ ಪ್ರತಿ ಸಂಸ್ಕೃತಿ ನಿರ್ಮಾಣವೂ ಸಂಕ್ರಮಣ. ಫೆ. ೧೯೯೨]

ಆಯಾಕಾಲ ಘಟ್ಟದಲ್ಲಿ ಆಳುವ ವರ್ಗಗಳ ಒಪ್ಪಿತ ಸಾಂಸ್ಕೃತಿಕ ಮೌಲ್ಯಗಳೊಂದಿಗೆ ಸಂಘರ್ಷಿಸಿದ ಪರಂಪರೆ ಭಕ್ತಿಪಂಥಗಳಿಗಿದೆ. ಇವುಗಳಲ್ಲಿ ಯಾವ ಮಜಲಿನಲ್ಲಿ 'ಪ್ರತಿ ಸಂಸ್ಕೃತಿ ಮೊಳೆಯುವುದನ್ನು ನಾಶಮಾಡುವ ತಂತ್ರ'ವಡಗಿತ್ತೊ ತೋಚುವುದಿಲ್ಲ. ಯಾವಾಗ 'ಕೈತಪ್ಪಿ ಹೋಗುತ್ತಿದ್ದ ಕೆಳವರ್ಗದ ಸಂಸ್ಕೃತಿಯನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳುವ Strategy ಯಾಗಿ ಸಂಸ್ಕೃತವನ್ನು ಕೈಬಿಟ್ಟದ್ದು' ಎಂಬುದೂ ಹೊಳೆಯುವುದಿಲ್ಲ. ಡಾ। ರಹಮತ್ ಭಕ್ತಿ ಪಂಥದ ನೆತ್ತಿಯ ಮೇಲೆ ಎತ್ತಿ ಹಾಕಿದ ಹಲಗೆ ತುಂಬಾ ಭಾರವಾದದ್ದು ಎನ್ನದೆ ವಿಧಿಯಿಲ್ಲ [ಬಂಜಗೆರೆ ಜಯ ಪ್ರಕಾಶ್ : ಪರಂಪರೆಯಲ್ಲಿ ಭಕ್ತಿಪಂಥದ ಪಾತ್ರವೇನು ? ಸಂಕ್ರಮಣ ಏಪ್ರಿಲ್ ೧೯೯೨]

ಎಷ್ಟೋ ಚರಿತ್ರೆಯ ಸೂಕ್ಷ್ಮಗಳನ್ನು ಅವಸರವಾಗಿ ದಾಟುವ ಬಂಜಗೆರೆಯವರು, ಪರಂಪರೆಯ ಬಗ್ಗೆ ತೀರಾ ಉದಾರವಾದಿಯಾಗಲು ಹೋಗಿ, ವೈದಿಕೀಕರಣವನ್ನು ತಮಗರಿಯದಂತೆಯೇ ಸಮರ್ಥಿಸುವ ಧಾಟಿಗಿಳಿದು ನಿಂತಂತಾಗಿದೆ,... ಪರಂಪರೆಯ ಮರುಮೌಲ್ಯಮಾಪನ ಮಾಡುವ ಜರೂರು ನಮ್ಮ ಮುಂದಿದೆ.

[ಡಾ। ರಹಮತ್ ತರೀಕೆರೆ: ಪರಂಪರೆಯನ್ನು ಬೆಲೆಗಟ್ಟುವ ವಿಧಾನ ಯಾವುದು ? ಸಂಕ್ರಮಣ ಜೂನ್-ಜುಲೈ ೧೯೯೨]

ಮೇಲಿನ ಮೂರೂ ಉಲ್ಲೇಖಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು. ಡಾ। ರಹಮತ್ ಸಾಮಾಜಿಕ ನೆಲೆಯಲ್ಲಿ ನಿಂತು ವೈದಿಕ ಪಂಥದಲ್ಲಿರುವ ವೈರುಧ್ಯಗಳನ್ನು ವಿಶ್ಲೇಷಿಸಲು ತೊಡಗಿದರೆ, ಜಯಪ್ರಕಾಶ್ ಆರ್ಥಿಕ ನೆಲೆಯಲ್ಲಿ ನಿಂತು ಭಕ್ತಿಪಂಥದ ಸಂಘರ್ಷವನ್ನು ನೋಡಲು ತೊಡಗುತ್ತಾರೆ. ಪರಿಣಾಮವಾಗಿ ಈ ಇಬ್ಬರೂ ವಿಚಾರವಂತರು ಬೇರೆ ಬೇರೆ ತೀರ್ಮಾನಗಳಿಗೆ ಬಂದು ತಲುಪುತ್ತಾರೆ. ಇದು ಸ್ವಾಭಾವಿಕವೇ. ಯಾಕೆಂದರೆ, ರಹಮತ್ ತಮ್ಮ ಮೊದಲ ಲೇಖನದಲ್ಲಿ ಭಾಷಾ ಪ್ರಶ್ನೆಯನ್ನು ಸಂದರ್ಭೋಚಿತವಾಗಿ ಹೇಳಿ ಮುಂದೆ ಹೋಗಿ, ಅದಕ್ಕೆ ಕಾರಣಗಳನ್ನು ತಮ್ಮ ಮುಂದಿನ ಪ್ರತಿಕ್ರಿಯೆಯಲ್ಲಿ ಹುಡುಕತೊಡಗುತ್ತಾರೆ. ಆದರೆ ಜಯಪ್ರಕಾಶರಿಗೆ, ವೈದಿಕ ಭಕ್ತಿ ಪಂಥಗಳು ಸಂಸ್ಕೃತವನ್ನು ಕೈಬಿಟ್ಟದ್ದು, ದೇಶ ಭಾಷೆಗಳನ್ನು ಕೈಹಿಡಿದದ್ದು ಯಾಕೆ ಎಂಬ ಪ್ರಶ್ನೆ ಮುಖ್ಯವಾಗುವುದೇ ಇಲ್ಲ. ಆದ್ದರಿಂದ ಅವರು ರಹಮತರ ಅಭಿಪ್ರಾಯವನ್ನು ತಪ್ಪಾಗಿ ಗ್ರಹಿಸಿಕೊಳ್ಳುತ್ತಾರೆ.

ನನ್ನ ಅನಿಸಿಕೆಯ ಪ್ರಕಾರ, ನಾವು ಮೊದಲು ಈ ಭಾಷಾ ಮಾಧ್ಯಮದ ತೊಡರನ್ನು ಬಿಡಿಸಿಕೊಂಡರೆ, ಆ ಭಾಷಾಮೂಲಕವಾಗಿಯೇ ಪ್ರತಿ ಸಂಸ್ಕೃತಿಯೊಂದು ಮೊಳೆಯುವ ಸಾಧ್ಯತೆಯನ್ನು ನಾಶಮಾಡುವ ಯುಕ್ತಿ (ತಂತ್ರ) ಇದಾಗಿರಲಿಲ್ಲವೆ ಎಂಬ ಪ್ರಶ್ನೆ ತನಗೆ ತಾನೆ ಇತ್ಯರ್ಥವಾಗುತ್ತದೆ ಎಂಬುದು.

ಭಾಷೆ ವ್ಯಕ್ತಿಯ ಅಭಿಪ್ರಾಯವನ್ನು ಇತರರಿಗೆ ತಿಳಿಸಲು ಒಂದು ಸಾಧನ; ಅದು ಸುದ್ದಿವಾಹಕ, ವಿಚಾರವಾಹಕ; ಜೊತೆಗೆ ಭಾಷೆ ವಿಚಾರ ಪ್ರಚೋದಕ ಹಾಗೂ ಕಾರ್ಯನಿರ್ವಾಹಕ. ಹಾಗೂ ಪ್ರೇರಕ. ಇಷ್ಟು ಸರ್ವಗ್ರಾಹಿ ಶಕ್ತಿಯುಳ್ಳ ಭಾಷೆಯಿಂದ ಏನು ತಾನೆ ಸಾಧ್ಯವಿಲ್ಲ? ಒಂದು ಸಂಸ್ಕೃತಿಯನ್ನು ಹುಟ್ಟು ಹಾಕುವ, ಮತ್ತೊಂದು ಸಂಸ್ಕೃತಿಯನ್ನು ನಾಶಗೈಯುವ ಸಾಮರ್ಥ್ಯ ಭಾಷೆಗೆ ಮಾತ್ರವೆ ಉಂಟು. 'ರಾಜ್ಯದ ಆಡಳಿತದ ಸರ್ವಾಧಿಕಾರವನ್ನು ನಿಮಗೆ ವಹಿಸಿದರೆ, ಆಡಳಿತ ನಿರ್ವಹಣೆಗೆ ನೀವು ಏನು ಮಾಡುವಿರಿ?' ಎಂದು ಚೀನಾದೇಶದ ಹಿರಿಯ ತತ್ವಜ್ಞಾನಿ ಕನ್‌ಫ್ಯೂಷಿಯುಸ್‌ನನ್ನು ಪ್ರಶ್ನಿಸಿದಾಗ ಆತ, 'ನಾನು ಜನರ ಭಾಷೆಯನ್ನು ಮೊದಲು ತಿದ್ದುತ್ತೇನೆ' ಎಂದನಂತೆ." (ಹಂಪನಾ: ಭಾಷಾ ವಿಜ್ಞಾನ ಪುಟ.೩) ಇಂಡಿಯಾದ ಸಂದರ್ಭದಲ್ಲಿ ವೈದಿಕ ಭಕ್ತಿ ಪಂಥದವರು ಆಯಾ ದೇಶ ಭಾಷೆಗಳ ಮೇಲೆ ತಮ್ಮ ಪ್ರಭಾವವನ್ನು ಬೀರಿ ಹೇಗೆ ಅವರ ಭಾಷೆಯನ್ನು ತಿದ್ದಿದರು ಮತ್ತು ತನ್ಮೂಲಕ ಜನರನ್ನು ತಮ್ಮತ್ತ ಒಲಿಸಿಕೊಂಡರು ಎಂಬುದು ಕುತೂಹಲಕಾರಿ ಅಧ್ಯಯನವಾಗುತ್ತದೆ.

ಕರ್ನಾಟಕದ ದಾಸಪಂಥ ಕನ್ನಡ ಮಾಧ್ಯಮವನ್ನು ಕೈಗೆತ್ತಿಕೊಳ್ಳಲು ಕಾರಣಗಳನ್ನು ಹುಡುಕುವ ಮುನ್ನ ಸಂಸ್ಕೃತ ಭಾಷಾಧಿಪತ್ಯದ ಬಗ್ಗೆ ಸ್ವಲ್ಪ ಅರಿವು ಅಗತ್ಯ ಬೇಕಾ

ಗುತ್ತದೆ. ಸುಮಾರು ಮೂರು ಸಾವಿರ ವರ್ಷಕ್ಕೂ ಮೀರಿ ಈ ಭಾಷಾ ಚಕ್ರಾಧಿಪತ್ಯ ಈ ದೇಶದಲ್ಲಿ ಅವಿಚ್ಛಿನ್ನವಾಗಿ ನಡೆದುಕೊಂಡು ಬಂದಿದೆ. ವೈದಿಕವರ್ಗದ ಸಾಂಸ್ಕೃತಿಕ ಇತಿಹಾಸವೆಂದರೆ ಸಂಸ್ಕೃತ ಭಾಷಾ ಇತಿಹಾಸವೇ ಆಗಿದೆ. ಅದು ಕಾಲ ಕಾಲಕ್ಕೆ ಇತರೇತರ ಯಾವ ಭಾಷಾ ಸಂಸ್ಕೃತಿಗಳೂ ತಲೆ ಎತ್ತದಂತೆ ನೋಡಿಕೊಳ್ಳುತ್ತ ಹಿಂದೂ ಸಂಸ್ಕೃತಿಯು ವಕ್ತಾರನಂತೆ ಕಾರ್ಯ ನಿರ್ವಹಿಸುತ್ತಾ ಬಂದಿದೆ. ಮೃತ ಭಾಷೆಯಾದ ಸಂಸ್ಕೃತ ದೇವ ಭಾಷೆಯೆಂಬ ಭ್ರಮೆ ಮೂಡಿಸಿ ಜೀವಂತವಿರುವ ಎಲ್ಲ ಭಾಷೆಗಳ ಮೈ ಹೊಕ್ಕು ಭೂತದಂತೆ ಕುಣಿಸಿದೆ. ಎಂದರೆ ವೈದಿಕ ಧರ್ಮದ ವರ್ಣಾಶ್ರಮ ಧರ್ಮಗಳ ವ್ಯವಸ್ಥೆಯನ್ನು ದೇಶ ಭಾಷಾ ಮಾಧ್ಯಮಗಳ ಮೂಲಕ ಜನರ ಮೇಲೆ ತಂದು ಹೇರಿದ ವೈದಿಕ ಭಕ್ತಿ ಪಂಥ ಅವುಗಳನ್ನು ಗೊಂದಲಗೊಳಿಸಿ ಅಲ್ಲಿ ಮೊಳೆಯುತ್ತಿದ್ದ ಪ್ರತಿ ಸಂಸ್ಕೃತಿಗಳನ್ನು ಬೆಳೆಯದಂತೆ ಚಿವುಟುತ್ತಾ ಬಂದಿತು. ಆದರೂ ಕೆಳಸಂಸ್ಕೃತಿಗಳು ತಮ್ಮ ಆಡುಮಾತುಗಳಲ್ಲಿ ಜೀವಂತವಾಗಿ ಕಾಲಕಾಲಕ್ಕೆ ಸಂಸ್ಕೃತ ಭಾಷಾಧಿಪತ್ಯವನ್ನು ತಿರಸ್ಕರಿಸುತ್ತಲೂ ಬಂದಿವೆ.

ಇದು ಮೊದಲು ಸಂಭವಿಸಿದ್ದು ಕ್ರಿ. ಪೂ. ಸುಮಾರು ಆರನೆಯ ಶತಮಾನದಲ್ಲಿ. ಸಂಸ್ಕೃತ ಭಾಷೆಗೆ ಪಾಣಿನಿ ಮತ್ತು ಪತಂಜಲಿಯರು ಅಷ್ಟಾಧ್ಯಾಯಿ ಹಾಗೂ ಮಹಾಭಾಷ್ಯದ ಮೂಲಕ ವ್ಯಾಕರಣ ನಿಯಮಗಳನ್ನು ಸೃಷ್ಟಿಸಿ ಅರಮನೆ ಗುರು ಮನೆಗಳಲ್ಲಿ ಬಂಧಿಸಿಟ್ಟರು. ಒಂದು ರೀತಿಯಲ್ಲಿ ಇದು ಸಂಸ್ಕೃತದ ಇತಿಶ್ರೀಯೇ ಆಯಿತು. ಯಾವಾಗ ಸಂಸ್ಕೃತವು ಜನಸಂಪರ್ಕದಿಂದ ದೂರ ಉಳಿಯಿತೋ ಜನವಾಣಿಗಳಾದ ಪಾಲಿ ಮತ್ತು ಪ್ರಾಕೃತಗಳು ತಲೆ ಎತ್ತತೊಡಗಿದವು. ವೈದಿಕರ ಕರ್ಮಕಾಂಡದ ವಿರುದ್ಧ ಬಂಡೆದ್ದು ಹುಟ್ಟಿದ ಜೈನ ಹಾಗೂ ಬೌದ್ಧ ಧರ್ಮಗಳು ತಮ್ಮ ಉಪದೇಶಗಳನ್ನು ಆಡುಭಾಷೆಗಳಲ್ಲಿ ಮಾಡುತ್ತ ಮೊಟ್ಟ ಮೊದಲ ಬಾರಿಗೆ ಎಂಬಂತೆ ದೇಶ ಭಾಷಾ ಮಾಧ್ಯಮವನ್ನು ಕಂಡುಕೊಂಡವು. ಮಹಾವೀರ ಮತ್ತು ಬುದ್ಧ, ಪ್ರಾಕೃತ ಹಾಗೂ ಪಾಲಿ ಭಾಷೆಗಳನ್ನು ಬಳಸುವ ಮೂಲಕ ಜನರ ಬಳಿಗೆ ಬಂದರು. ನಿತ್ಯವ್ಯವಹಾರಕ್ಕೂ ಧರ್ಮ ಪ್ರಚಾರಕ್ಕೂ ಸೃಜನ ಶೀಲ ರಚನೆಗೂ ಪಾಲಿ ಮತ್ತು ಪ್ರಾಕೃತಗಳು ಮೈಯೊಡ್ಡಿಕೊಂಡು ಸಮರ್ಥವಾಗಿ ಬೆಳೆದವು. ಸವಾಡವೊ ಎಂಬಂತೆ ಸಾಮಾನ್ಯ ಜನ ತಮ್ಮದೇ ಆದ ಭಾಷೆಗಳ ಮೇಲಿನ ಪ್ರೀತಿಯಿಂದ ಬುದ್ಧ, ಮಹಾವೀರರ ಉಪದೇಶಗಳಿಗೆ ಮಾರು ಹೋದರು. ಜೈನ ಮತ್ತು ಬೌದ್ಧ ಧರ್ಮಗಳು ಬೇಗ ಜನಪ್ರಿಯವಾಗುತ್ತ ಬಂದವು. ಆದರೆ ಚಂದ್ರಗುಪ್ತ ಮೌರ್ಯನ ಗುರು ಚಾಣಕ್ಯ (ಕ್ರಿ. ಪೂ-೪ನೇ ಶತಕ)ನ ಕಾಲಕ್ಕೆ ಮತ್ತೆ ವೈದಿಕ ಧರ್ಮದ ಪ್ರಾಬಲ್ಯ ಹೆಚ್ಚಾಯಿತು. ಆದರೂ ಪ್ರಾಕೃತ ಸಾಹಿತ್ಯ ಸಾಕಷ್ಟು ವಿಪುಲವಾಗಿಯೇ ಸೃಷ್ಟಿಯಾಯಿತು. ಸಂಸ್ಕೃತ ಮಾತ್ರ ಸಾಮಾನ್ಯನಿಗೆ ಎಟುಕದಾಯಿತು.

ತದನಂತರ ಕ್ರಿ. ಶ. ೪ ನೇ ಶತಮಾನಕ್ಕೆ ಗುಪ್ತರ ಕಾಲದ ಆರಂಭದೊಂದಿಗೆ ಸಂಸ್ಕೃತದ ಸುವರ್ಣ ಯುಗವೂ ಆರಂಭವಾಯಿತು. ಕ್ರಿ ಶ. ೬ನೇ ಶತಮಾನದಲ್ಲಿ ದಕ್ಷಿಣದ ತಮಿಳುನಾಡಿನಲ್ಲಿ ಭಕ್ತಿಪಂಥ ಆರಂಭವಾಯಿತು. ಶೈವ ನಾಯನಾರರೂ ವೈಷ್ಣವ ಆಳ್ವಾರರೂ ತಮಿಳನ್ನು ತಮ್ಮ ಭಕ್ತಿ ಗೀತೆಗಳಿಗೆ ಮಾಧ್ಯಮವನ್ನಾಗಿ ಆರಿಸಿಕೊಂಡು ಬಹುಬೇಗ ಜನಪ್ರಿಯಗೊಂಡರು. ಕ್ರಿ. ಶ. ೭-೮-೯ರ ಸುಮಾರಿಗೆ ಭಕ್ತಿ ಪಂಥದ ಪ್ರಭಾವ ಉತ್ತರ ಭಾರತದಲ್ಲಿ ಕಾಣಿಸಿಕೊಂಡಿತು. ಈ ಭಕ್ತಿಪಂಥವು ಜನಮನ್ನಣೆ ಗಳಿಸಲು ಇದ್ದ ಮುಖ್ಯ ಕಾರಣಗಳೆಂದರೆ, ಮೋಕ್ಷಕ್ಕೆ ಅತ್ಯಂತ ಸುಲಭ ಮಾರ್ಗ ಭಕ್ತಿ ಮಾತ್ರ ಎಂದದ್ದು ಮತ್ತು ಅದನ್ನು ಅವರಾಡುವ ಭಾಷೆಯಲ್ಲಿ ಹೇಳಿ ನಂಬಿಸಿದ್ದು. ಇತ್ತ ಅತ್ಯಂತ ಕಟ್ಟುನಿಟ್ಟಾಗಿ ತನ್ನ ಭಾಷಾನಿಷ್ಠೆಯನ್ನು ಕಾಪಾಡಿಕೊಂಡು ಬಂದ ತಮಿಳು ಇವತ್ತಿಗೂ ದ್ರಾವಿಡ ಜನರ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದರಲ್ಲಿ ಸರ್ವ ಸಮರ್ಥವಾಗಿದೆ.

ಆದರೆ, ಅದ್ವೈತ ಸಿದ್ಧಾಂತದ ಪ್ರವರ್ತಕರಾದ ಶಂಕರಾಚಾರ್ಯರಿಗೆ ಇತ್ತ ದ್ರಾವಿಡ ಸಂಸ್ಕೃತಿಯ ಬೆಳವಣಿಗೆಯನ್ನಾಗಲೀ ಅತ್ತ ಬೌದ್ಧ ಮತ್ತು ಜೈನ ಧರ್ಮಗಳ ಜನಪ್ರಿಯತೆಯನ್ನಾಗಲೀ ಸಹಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಕ್ರಿ. ಶ. ಸು. ೮ನೇ ಶತಮಾನದಲ್ಲಿ ಕೇರಳದಿಂದ ಹೊರಟ ಇವರು ಮತ್ತು ಇವರ ಶಿಷ್ಯಪಡೆ ಅಖಂಡ ಭರತ ಖಂಡವನ್ನು ಸುತ್ತಿ ಗುಂಡಾಗಿರಿ ಮಾಡುತ್ತ ಖಿಲವಾಗುತ್ತಿದ್ದ ವೈದಿಕ ಧರ್ಮದ ಪುನರುತ್ಥಾನ ಕಾರ್ಯದಲ್ಲಿ ತೊಡಗಿದರು. ಅವರು ಸಂಸ್ಕೃತದಲ್ಲಿ ಹೇಳಿದ ಅದ್ವೈತ ತತ್ವಗಳು ಯಾರಿಗೆ ಮುಟ್ಟಿದವೊ ತಿಳಿಯದು. ಆದರೆ, ಉಗ್ರ ಹಿಂದೂವಾದಿ (R.S.S ಮಾದರಿ)ಗಳಾದ ಶಂಕರ-ಶಿಷ್ಯರ ಉಪಟಳವನ್ನು ತಾಳಲಾರದೆ ಬೌದ್ಧ ಧರ್ಮ ಇಂಡಿಯಾದಿಂದಲೇ ತಲೆ ಮರೆಸಿಕೊಂಡು ಹೋಗಿ, ಪರದೇಶಿಯಾಗಿ ಬದುಕಿಕೊಳ್ಳಬೇಕಾಯಿತು.

ಭಕ್ತಿ ಪಂಥದ ನೇತಾರರಾದ ಕಬೀರ, ಚೈತನ್ಯ, ವಾಸುದೇವ, ತುಳಸೀದಾಸ, ತುಕಾರಾಮ, ಮೀರಾಬಾಯಿ ಮುಂತಾದ ಭಕ್ತರು ದೇಶ ಭಾಷೆಗಳಲ್ಲಿ ಹಾಡುಗಳನ್ನು ಕಟ್ಟಿ ಭಕ್ತಿಯ ಹೊಳೆ ಹರಿಸಿದರು. ತಮಿಳಿನಲ್ಲಿ ಭಕ್ತಿ ಸಾಹಿತ್ಯ ಸೃಷ್ಟಿಯಾದದ್ದನ್ನು ಹಿಂದೆಯೇ ಹೇಳಿದೆ. ಕನ್ನಡದ ಮಟ್ಟಿಗೆ ಹೇಳುವುದಾದರೆ, ಜೈನಕವಿಗಳು ಮೊದಲು ಕನ್ನಡವನ್ನು ಆದರಿಸಿ ಕಾವ್ಯರಚನೆ ಮಾಡಿದರು. ೧೨ನೆಯ ಶತಮಾನದಲ್ಲಿ ಮೂಡಿ ಬಂದ ಶರಣ ಚಳುವಳಿಯು ವಸ್ತು ಮತ್ತು ಭಾಷೆಯ ದೃಷ್ಟಿಯಿಂದ ಕ್ರಾಂತಿಯನ್ನೇ ಮಾಡಿತು. ಮೊದಲ ಬಾರಿಗೆ ಜನವಾಣಿಯಾದ ಕನ್ನಡ ಶಿವವಾಣಿಯಾಗಿ ಪ್ರಮೋಷನ್ ಪಡೆಯಿತು. ವಚನಗಳು ಉಪನಿಷತ್ತಿಗೆ ಸರಿ ಸಮಾನ ಎಂದು ಕೊಂಡಾಡಲ್ಪಟ್ಟರೂ ವೈದಿಕ ಭಕ್ತಿಪಂಥ ಇನ್ನೂ ಕನ್ನಡದತ್ತ ಕಣ್ಣು ತೆರೆಯಲಿಲ್ಲ. 'ಶೂದ್ರರಿಗೆ, ಸ್ತ್ರೀಯ

ರಿಗೆ ವೇದ ವಿದ್ಯೆ ಸಲ್ಲ' ಎಂದು ಕಟ್ಟುಹಾಕಿದ ಶಂಕರರ ಮಾತಂತಿರಲಿ, 'ಶೂದ್ರರಿಗೂ ಸ್ತ್ರೀಯರಿಗೂ ವೇದ ವಿದ್ಯೆಯನ್ನು ತಿಳಿಸುತ್ತೇನೆ ' ಎಂದ ರಾಮಾನುಜರು ಸಹ ಅವರಾಡುವ ಭಾಷೆಯ ಬಗೆಗೆ ತಲೆ ಕೆಡಿಸಿಕೊಳ್ಳಲಿಲ್ಲ. ಆಮೇಲೆ ಬಂದ ಕನ್ನಡ ನಾಡಿನವರೇ ಆದ ಉಡುಪಿಯ ಮಧ್ವಾಚಾರ್ಯರು (೧೩ನೇ ಶತಮಾನ) ಕೂಡ ಸಂಸ್ಕೃತ ಬಿಟ್ಟು ಕನ್ನಡದತ್ತ ಕಣ್ಣು ತೆರೆದು ನೋಡಲಿಲ್ಲ. ಒಟ್ಟಿನಲ್ಲಿ ಕರ್ನಾಟಕದಲ್ಲಿ ದಾಸ ಪಂಥ ಬರುವವರೆಗೆ ತ್ರಿಮತಸ್ಥರಲ್ಲಿ ಯಾರೂ ಕನ್ನಡ ಭಾಷೆಯನ್ನು ಲಕ್ಷ್ಯಕ್ಕೇ ತೆಗೆದುಕೊಳ್ಳಲಿಲ್ಲ. ಹೀಗೆ ವೈದಿಕ ಭಕ್ತಿಪಂಥದವರಿಗೆ ಕನ್ನಡ ಭಾಷೆ ಅಸ್ಪೃಶ್ಯವಾಗಿಯೇ ಉಳಿಯಿತು.

ಇವೆಲ್ಲ ಆದ ಸುಮಾರು ೨೦೦-೩೦೦ ವರ್ಷಗಳ ನಂತರ ಕರ್ನಾಟಕದ ದಾಸಪಂಥ ಒಮ್ಮಿಂದೊಮ್ಮೆಗೆ ಕನ್ನಡದತ್ತ ಕಣ್ಣು ತೆರೆಯಲು ಕಾರಣಗಳೇನಿರಬಹುದು ? ಇದಕ್ಕೆ ಸಂಪ್ರದಾಯವಾದಿಗಳು ನೀಡುವ ಉತ್ತರ ಅಸಾಮಾನ್ಯವಾಗಿದೆ; ಅದನ್ನೆಲ್ಲ ಒಂದೇ ಮಾತಿನಲ್ಲಿ ಹೇಳುವುದಾದರೆ ದುರಾಕ್ರಮಣದಿಂದ ಜರ್ಜರಿತವಾದ ಹಿಂದೂ ಧರ್ಮವನ್ನು ಪುನರುಜ್ಜೀವನಗೊಳಿಸಲು ಕರ್ನಾಟಕದ ಭಕ್ತಿಪಂಥ ಹುಟ್ಟಿ ಬಂದಿತು; ಕನ್ನಡವಲ್ಲಿ ವೈದಿಕ ಕೀರ್ತನಕಾರರು ಹಾಡಿದ್ದರಿಂದ ಅದಕ್ಕೆ ಮಾನ್ಯತೆ ಬಂತು; ಕನ್ನಡದ ಕೀರ್ತನೆಗಳು 'ಪುರಂದರೋಪನಿಷತ್ತು' ಎಂದು ಕರೆಸಿಕೊಂಡವು, ಇತ್ಯಾದಿಯಾಗಿ ಭೋಳೆ ಬಿಡುವುದನ್ನು ಯಾರೂ ಗಮನಿಸಬಹುದು. ಆದರೆ ಆದದ್ದೇ ಬೇರೆ ಎನಿಸುತ್ತದೆ. ಬ್ರಾಹ್ಮಣ ವರ್ಗ ತಮಗೊದಗಿ ಬಂದ ವಿಪತ್ತನ್ನು ಭವ್ಯತೆಗೇರಿಸಿಕೊಂಡ ರೀತಿ ಇದು. 'ತಾನುಂಟು ಮೂರು ಲೋಕ ಉಂಟು' ಎಂಬಂಥ ಜನ ಇವರು. ರಾಜಾಶ್ರಯದಿಂದ ಪಲ್ಲಟಗೊಂಡು ಬೀದಿಗೆ ಬಿದ್ದ ಇವರಿಗೆ 'ಗೇದು' ಜೀವನ ಮಾಡಲು ಸಾಧ್ಯವಿರಲಿಲ್ಲ. ಅತ್ತ ಕರೆದು ಮಣೆ ಹಾಕುವವರು ಯಾರೂ ಇರಲಿಲ್ಲ. ಪ್ರವಾಹದಲ್ಲಿ ಕೊಚ್ಚಿ ಹೋಗುತ್ತಿದ್ದ ನರಿ 'ಪ್ರಪಂಚ ಹಾಳಾಯಿತು' ಎಂದಿತಂತೆ. ಯಾರೊ ದಡದಲ್ಲಿ 'ಎಲ್ಲಿ ಹಾಳಾಗಿದೆ ನಾವು ಉಂಟಲ್ಲವೆ ?' ಎಂದರೆ 'ನನ್ನ ಪಾಲಿಗೆ ಸರ್ವನಾಶವಾಗಿ ಉಳಿದವರ ಪಾಲಿಗೆ ಇದ್ದರೆಷ್ಟು ಬಿಟ್ಟರೆಷ್ಟು' ಎಂದು ಕೊಚ್ಚಲ್ಪಟ್ಟಿತಂತೆ. ಹಾಗೆ ಭಕ್ತಿ ಪಂಥದವರು ಅಸಹಾಯಕರಾಗಿ 'ಶ್ರೀಕೃಷ್ಣನಾಮವೆಂಬ ಕಲ್ಲುಸಕ್ಕರೆ'ಯನ್ನು ಮಾರಾಟ ಮಾಡಲು ಇತ್ತ ಕನ್ನಡ ಜನರ ಮನೆ ಬಾಗಿಲಿಗೆ ಬಂದರು. ಭಗವದ್ಭಕ್ತಿಯನ್ನು encash ಮಾಡಿಕೊಂಡು ಬದುಕಿದರು. ಜನರ ಬಳಿಗೆ ಬಂದ ಇವರು ಆಗ ಜನರ ಭಾಷೆಯಾದ ಕನ್ನಡದಲ್ಲಿ ಬಾಯಿ ತೆರೆದರು. ಇದಲ್ಲದೆ, ಸಂಪ್ರದಾಯವಾದಿಗಳ ಮಾತು ನಿಜವೇ ಇದ್ದ ಪಕ್ಷದಲ್ಲಿ, ಉತ್ತರದಲ್ಲಿ ಮುಸಲ್ಮಾನ ದೊರೆಗಳೇ ಅನೇಕ ಶತಮಾನಗಳ ಕಾಲ ಆಡಳಿತ ನಡೆಸಿಸಿದರಲ್ಲ; ಅಲ್ಲಿ ಹಿಂದೂ ಧರ್ಮ ಸಂಪೂರ್ಣವಾಗಿ ನಾಶವಾಗಲಿಲ್ಲವಲ್ಲ; ಅದೂ ಅಲ್ಲದೆ ಹಿಂದೂ–

ಮುಸ್ಲಿಮರ ಸಾಮರಸ್ಯದಿಂದ ಲಲಿತ ಕಲೆಗಳು ಇನ್ನೂ ಚೆನ್ನಾಗಿಯೇ ಅರಳಿದವು ಆದ್ದರಿಂದ 'ಕರ್ನಾಟಕದಲ್ಲಿ ಭಕ್ತಿಪಂಥ ಸಂಸ್ಕೃತವನ್ನು 'ಕೈಬಿಟ್ಟು ಕನ್ನಡವನ್ನು ಕೈಹಿಡಿವದ್ದು' ಅವರ ಸ್ವಂತ ದರ್ದಿನಿಂದ ಮಾತ್ರವೇ; ಹೊರತು ದೇಶ-ಭಾಷೆಯ ಉದ್ಧಾರಕ್ಕೇನಲ್ಲ. (ವಿವರಗಳಿಗೆ ನೋಡಿ; ಕೆ. ಜಿ. ನಾಗರಾಜಪ್ಪ. ಭಕ್ತಿ ಸಾಹಿತ್ಯದಲ್ಲಿ ಪ್ರತಿಭಟನೆಯ ವಿಧಾನಗಳು. ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ. ಸಾಹಿತ್ಯ ಅಕಾಡೆಮಿ) ಟಿ. ವಿ. ಚ ಣಕ್ಯನನ್ನು ಸ್ಮರಿಸಿಕೊಳ್ಳಿ. ಈ ಅಂಶವನ್ನು ಬಂಜಗೆರೆ ಜಯಪ್ರಕಾಶ್ ಮನಗಾಣಬೇಕು. ಭಕ್ತಿ ಪಂಥ ಹರಿಪಾರಮ್ಯವನ್ನು ಒಪ್ಪಿಕೊಂಡು, ಹರಿ ಸರ್ವೋತ್ತಮನೆಂದು ಸಾರುತ್ತ, ವರ್ಣವ್ಯವಸ್ಥೆಯನ್ನು ಸ್ಥಿರಗೊಳಿಸುತ್ತ ಜೊತೆಗೆ ತಮ್ಮ ಹೊಟ್ಟೆ ಹೊರೆದುಕೊಳ್ಳುತ್ತ ಬದುಕಿತು. ಇನ್ನು ಇದು ಯಾವ ವ್ಯವಸ್ಥೆಯ ವಿರುದ್ಧ ಸಂಘರ್ಷ ಹೂಡಿತು ? ಜಯಪ್ರಕಾಶರೇ ಹೇಳಲಿ. ಭಾಗವತ ಕೃಷ್ಣನ ಬಾಲಲೀಲೆಗಳನ್ನು, ದಶಾವತಾರದ ಕತೆಗಳನ್ನು ಕುರಿತು ಮತ್ತೆ ಮತ್ತೆ ಕೀರ್ತನೆಗಳನ್ನು ಕಟ್ಟಿ ಹಾಕುತ್ತ 'ಹಾಡಿದ್ದೆ ಹಾಡೋ ಕಿಸುಬಾಯಿ ದಾಸ' ಎಂಬ ಗಾದೆ ಹುಟ್ಟಲು ಕಾರಣರಾದರು. ಪುಕ್ಕಟೆ ಇಂಥ ಗಾದೆ ಹುಟ್ಟಿ ಬಂದೀತೆ!

> ತಾಳದಂಡಿಗೆ ಶೃತಿಮೇಳ ತಂಬೂರಿಗೊಂಡು
> ಸೂಳೆಯಂತೆ ಕುಣಿಯುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ॥

ಹೀಗೆಂದು ದಾಸರೇ ಹಾಡಿದರು. ಕನ್ನಡದಲ್ಲಿ ಸಾಹಿತ್ಯ ರಚನೆಯಾದ ಸುಮಾರು ಒಂದು ಸಾವಿರ ವರ್ಷಗಳ ನಂತರ ಭಕ್ತಿ ಪಂಥದ ವೈದಿಕರು ಕನ್ನಡದಲ್ಲಿ ಬಾಯ್ಬಿಡಲು ಕಲಿತರು, ಅಗತ್ಯವೇ ಅನ್ವೇಷಣೆಗೆ ತೊಡಗಿಸುತ್ತದೆ. ಇಲ್ಲವಾಗಿದ್ದರೆ ಸಂಸ್ಕೃತದಂತ ಗೋಪುರದಿಂದ ಕೆಳಕ್ಕೆ ಇಳಿಯುತ್ತಿದ್ದರೆ ? ಜೊತೆಗೆ ಶರಣರ ಕನ್ನಡ ಭಾಷಾ ಮೌಢ್ಯಮವೂ ಇವರಿಗೆ ಆದರ್ಶವಾಗಿ ಕಂಡಿರಬೇಕು. ಹೀಗಾಯಿತು. ಈ ಭಕ್ತರು ಜನರ ಬಳಿಗೆ ಬರುವಾಗ ಅವರ ಭಾಷೆ, ಆವರ ವೇಷ ಎಲ್ಲ ಬದಲಾಯಿತು. 'ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣುಬಟ್ಟೆಗಾಗಿ' ಎಂಬ ಕೆಳಸಂಸ್ಕೃತಿಯ ಸರಳ ಸತ್ಯ ಅರ್ಥವಾಯಿತು; ಆಗಲೂ ಕೆಲವರು ತಮ್ಮ ಅಕ್ಷರ ವಿದ್ಯೆಯನ್ನು ತುಂಡರಸರಿಗೆ, ಸಾಮಂತ ಪಾಳೆಗಾರರಿಗೆ, ಮುಸ್ಲಿಮ್ ದೊರೆಗಳಿಗೆ ಮಾರಿಕೊಂಡು ಹೊಟ್ಟೆ ಹೊರೆವದ್ದೂ ಇದೆ. ವೈದಿಕರ ಧಾರ್ಮಿಕ ವಿಧಿ ಮಾತ್ರ ಸಂಸ್ಕೃತದಲ್ಲಿಯೇ ಮುಂದುವರಿಯಿತು. "ಸಂಸ್ಕೃತದ ವೈದಿಕ ಸಂಸ್ಕೃತಿಯೇ ಕನ್ನಡದಲ್ಲಿ ಪ್ರತಿಬಿಂಬಿತವಾಯ್ತು. ತಾತ್ವಿಕವಾಗಿ ಭಿನ್ನವಾದ ತ್ರಿಮತಸ್ಥರು ವರ್ಣ ವ್ಯವಸ್ಥೆಯ ಸಾಮಾಜಿಕ ವಿಷಯದಲ್ಲಿ ಏಕಾಭಿಪ್ರಾಯವುಳ್ಳವರು" (ಕೆ. ಜಿ. ನಾಗರಾಜಪ್ಪ) ಅಂತೂ ಪ್ರತಿಷ್ಠಿತ ವೈದಿಕ ಸಂಸ್ಕೃತಿ ಕನ್ನಡ ನಾಡಿನಲ್ಲಿ ಅಧೀನ ಸಂಸ್ಕೃತಿಗಳು ಬೆಳೆಯುವುದಕ್ಕೆ ಅಡ್ಡಿಯುಂಟು ಮಾಡಿತು.

ವಚನಕಾರರು ಕಾಯಕಕ್ಕೆ ಮಹತ್ವ ನೀಡಿದರೆ, ದಾಸರು ಭಿಕ್ಷಾವೃತ್ತಿಯನ್ನು ವೈಭವೀಕರಿಸಿ ಬದುಕಿದರು. ದಾಸಪಂಥದವರಿಗೆ ಈ ಬದುಕುವ ಕಲೆ ಚೆನ್ನಾಗಿ ಸಿದ್ಧಿಸಿತ್ತು. ಪರಿಸ್ಥಿತಿಯೇ ಅವರಿಗೆ ಅವನ್ನು ಕಲಿಸಿತು. ಆದಕ್ಕಾಗಿ ಅವರು ಸಾಹಿತ್ಯ, ಸಂಗೀತ, ನೃತ್ಯ ಮುಂತಾದ ಲಲಿತಕಲೆಗಳನ್ನು ಬಳಸಿಕೊಂಡರು. ಕೆಲವೊಮ್ಮೆ ಅವುಗಳನ್ನು ಶೋಷಣೆಗೂ ಒಳಪಡಿಸಿದರು. [ಇವತ್ತಿಗೂ ಕೆಲವು ಮೇಲುಜಾತಿಯ ಜನ ಉಪಜೀವನಕ್ಕೆ ಕಲೆಗಳನ್ನೇ ಆಧಾರಮಾಡಿಕೊಂಡಿರುವುದು ವಿಶೇಷ ಸಂಗತಿ ಏನಲ್ಲ]. ದಾಸರು ಕನ್ನಡದಲ್ಲಿ ಕೀರ್ತನೆಗಳನ್ನು ಬರೆದರು: ಸಂಗೀತಲಯದಲ್ಲಿ ಹಾಡಿದರು; ಗೆಜ್ಜೆಕಟ್ಟಿ ವೇಷ ಹಾಕಿ ಕುಣಿದರು; ಕಡೆಗೆ ಭವನಾಶಿ ಒಡ್ಡಿ ಬೇಡಿದರು. ಅಂತೂ ದುಡಿವ ವರ್ಗವನ್ನು ಆಕರ್ಷಿಸಿದರು, ಇದರ ಫಲವಾಗಿ ಸಮಾಜದಲ್ಲಿ ಕರ್ಮಸಿದ್ಧಾಂತದ ಮಂತ್ರದಂಡ ತೂಗಿತು; ಜನ್ಮಾಂತರದ ಭೂತ ಕುಣಿಯಿತು. ಭಕ್ತಿಮಾರ್ಗ ಬಂದಳಿಕೆಯಂತೆ ಜನರ ಬೆನ್ನೇರಿತು. ಆಧುನಿಕ ಕಾಲದಲ್ಲಿ ವಿದೇಶೀ ಮಿಶನರಿಗಳು ತಮ್ಮ ಮತ ಪ್ರಚಾರಕ್ಕೆ ಹೇಗೆ ದೇಶಭಾಷೆಗಳನ್ನು ಬಳಸಿದರೊ ಅದೇ ಲೆಕ್ಕದಲ್ಲಿ ಭಕ್ತಿಪಂಥವು 'ಸಂಸ್ಕೃತವನ್ನು ಕೈಬಿಟ್ಟು ಕನ್ನಡವನ್ನು ಕೈ ಹಿಡಿಯಿತು;' ಅನಂತರ ಕನ್ನಡ ಅವರನ್ನು ಬದುಕಿಸಿತು. ಈ ಸರಳ ಸತ್ಯವನ್ನು ಮನಗಾಣದ ಜಯಪ್ರಕಾಶ್ ಸುತ್ತಿ ಬಳಸಿ ಭಕ್ತಿ ಪಂಥವನ್ನು ಸಮರ್ಥಿಸ ಹೋಗುವುದು ಸಮಂಜಸವೆನಿಸುವುದಿಲ್ಲ. ಅವರ ಸಂಘರ್ಷ ಏನಿದ್ದರೂ ಕಮ್ಯುನಲ್ ಇತ್ತು. ಶರಣರು ಹರನೇ ಹೆಚ್ಚು ಎಂದರೆ ದಾಸರು, ವಿಷ್ಣುವೇ ಹೆಚ್ಚು ಎಂದರು, ಅಷ್ಟೆ. ಈ ಮೇಲಾಟದಲ್ಲಿ ಶ್ರೀಸಾಮಾನ್ಯ ಇನ್ನೂ ಜರ್ಜರಿತನಾದ.

'ಸುಲಿದ ಬಾಳೆಯ ಹಣ್ಣಿನಂದದಿ ಇರುವ ಕನ್ನಡದಲ್ಲಿಯೇ ಮೋಕ್ಷವನ್ನು ಗಳಿಸಿಕೊಂಡರ ಸಾಲದೆ ? ಸಂಸ್ಕೃತದಲ್ಲಿನ್ನೇನು ?' ಎಂದು ಕನ್ನಡ ವಿರೋಧಿ ಗುಂಪಿಗೆ ಬ್ರಾಹ್ಮಣ ಕವಿಯೇ ಉತ್ತರಿಸಬೇಕಾದ ಪರಿಸ್ಥಿತಿ ಇನ್ನೂ ಉಳಿದೇ ಇತ್ತು. ಹೀಗೆ ಕನ್ನಡ, ಭಕ್ತಿಪಂಥದವರಿಗೆ ವೈದಿಕ ಧರ್ಮ ಪ್ರಚಾರ ಸಾಧನವಾಯಿತು. ದೇವರು ಮತ್ತು ಯಮ ಇವರನ್ನು ಮುಂದೆ ಮಾಡಿ ಭಯಭಕ್ತಿಯನ್ನು ಹುಟ್ಟಿಸಿತು; ಜನರಲ್ಲಿ ಆತ್ಮ ಪೌರುಷ ನಶಿಸಿ ಹೋಗಿ, ವೈರಾಗ್ಯವೇ ಪರಮ ಭಾಗ್ಯ ಎನ್ನುವಂತಾಯಿತು. ಇಹದ ಬಗ್ಗೆ ಅಲರ್ಜಿ, ಪರದ ಬಗ್ಗೆ ಹಳಹಳಿಕೆ ಶುರುವಾಯಿತು; ಇದೆಲ್ಲದರ ಪರಿಣಾಮವಾಗಿ ರಾಷ್ಟ್ರದಲ್ಲಿ ಆರ್ಥಿಕ ಹಿಂಜರಿಕೆಯುಂಟಾಯಿತು. ಭಕ್ತಿ ಪಂಥದವರು ಜನರನ್ನು ನಂಬಿಸಿ ತಮ್ಮ ಉಪಜೀವನ ಸಾಗಿಸಿದ್ದು ಶೋಷಣೆಯ ಇನ್ನೊಂದು ಮುಖ, ಅಷ್ಟೆ.

"ಒಟ್ಟಿನಲ್ಲಿ ಶೂದ್ರರು ಮತ್ತು ಸ್ತ್ರೀಯರು ತಿರುಗಿ ಬೀಳದಂತೆ, ವರ್ಣವ್ಯವಸ್ಥೆಯ ಆಚರಣೆಗೆ ಕಿಂಚಿತ್ತೂ ಚ್ಯುತಿ ಒದಗದಂತೆ, ಭಕ್ತಿಪಂಥವನ್ನು ಆಧುನಿಕ ಕಾಲಕ್ಕೆ ಅವರು ಒಗ್ಗಿಸಿಕೊಂಡರು" (ಕೆ. ಜಿ. ನಾಗರಾಜಪ್ಪ)

ಸಾರಾಂಶವೆಂದರೆ, ಭಕ್ತಿ ಪಂಥ ಸಂಸ್ಕೃತವನ್ನು ಕೈಬಿಟ್ಟು ಕನ್ನಡವನ್ನು ಕೈಹಿಡಿದದ್ದು ಕೆಳಸಂಸ್ಕೃತಿಯನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವ strategy ಯಾಗಿ ಮಾತ್ರವೇ. ಬಂಜಗೆರೆ ಜಯಪ್ರಕಾಶ್ ಅವರು, ಭಕ್ತಿ ಪಂಥವು ಕಾಲಕಾಲಕ್ಕೆ ವ್ಯವಸ್ಥೆಯ ವಿರುದ್ಧ ಸಂಘರ್ಷ ಹೂಡಿ, ಕೆಳ ಸಂಸ್ಕೃತಿಯ ಬಗ್ಗೆ ಉದಾರ ನೀತಿಯನ್ನೇ ಅನುಸರಿಸಿತು ಎಂಬ ತೀರ್ಮಾನಕ್ಕೆ ಬರುವುದೂ ಸಮಂಜಸವಲ್ಲ. ಮತ್ತು ರಹಮತ್ ಭಕ್ತಿ ಪಂಥದ ನೆತ್ತಿಯ ಮೇಲೆ ಎತ್ತಿ ಹಾಕಿದ ಹಲಗೆ ತುಂಬಾ ಭಾರವಾದದ್ದು ಎಂಬ ಆರೋಪವೂ ಉಚಿತವಲ್ಲ. ಯಾಕೆಂದರೆ. ಭಾರವಾದ ಹಲಗೆಯನ್ನು ಕೆಳ ವರ್ಗದ ನೆತ್ತಿಯ ಮೇಲೆ ಎತ್ತಿ ಹಾಕಿದ್ದು ಭಕ್ತಿಪಂಥವೇ-ಎಂಬುದನ್ನು ಜಯಪ್ರಕಾಶ್ ಪರಿಶೀಲಿಸಬೇಕು. ಡಾ। ರಹಮತ್ ಅದನ್ನು ಸ್ವಲ್ಪ ಅತ್ತ ಸರಿಸಿ, ವಿನಾ

ಗಿದೆ ಎಂದು ನೋಡಲು ಪ್ರಯತ್ನಿಸಿದ್ದಾರಷ್ಟೆ.

ಇಷ್ಟಾಗಿಯೂ, ಕೀರ್ತನೆಗಳ ಮೂಲಕ ಕರ್ನಾಟಕ ಸಂಗೀತ ಮತ್ತು ಸಾಹಿತ್ಯಕ್ಕೆ ಪುರಂದರದಾಸರು ಕೊಟ್ಟ ಕೊಡುಗೆಯನ್ನು ಯಾರೂ ಅಲ್ಲಗಳೆಯಬರುವುದಿಲ್ಲವೆಂಬ ಎಚ್ಚರದೊಂದಿಗೇ ಇಷ್ಟೆಲ್ಲ ಹೇಳಿದ್ದೇನೆ.

## ಕನಕದಾಸನ ಸಂಸ್ಕೃತೀಕರಣ

ಕನಕದಾಸನ ಮನಸ್ಸು ನುಡಿಸಿಟ್ಟ ವೀಣೆಯಂತೆ. ಅವನಲ್ಲಿ ಯಾವ ಪೂರ್ವ ಪಕ್ಷಪಾತವೂ ಇಲ್ಲ. ಶೈವ, ವೈಷ್ಣವ ಹಾಗೂ ಮುಹಮದೀಯ ಎಲ್ಲ ಮತ ತತ್ವಗಳಿಂದಲೂ ಅವನು ಪ್ರಭಾವಿತನಾಗಿದ್ದಾನೆ. ಜೀವ ವಿರೋಧಿ ವಿಚಾರಗಳಿದ್ದರೆ ಅತ್ತ ಸರಿಸಿ. ಜೀವ ಪರವಾದ ಅಂಶಗಳಿದ್ದರೂ ಅವನು ಮುಕ್ತಮನಸ್ಸಿನಿಂದ ಸ್ವೀಕರಿಸುತ್ತಾನೆ. ಅವನೊಬ್ಬ ಮಹಾಮಾನವತಾವಾದಿಯೆಂಬಂತೆ ತೋರಿಬರುತ್ತಾನೆ. ಇದಕ್ಕೆ ಮುಖ್ಯ ಕಾರಣವೆಂದರೆ. ಅಕ್ಕಮಹಾದೇವಿಯು ಹೇಳುವಂತೆ 'ನೊಂದ ನೋವ ನೋಯದವರೆತ್ತಬಲ್ಲರು ?' ಕೆಳ ಜಾತಿಯಿಂದ ಬಂದ ಕನಕನಿಗೆ ಜಾತಿ ವಿದ್ವೇಷದ ಹೊಗೆ ಚೆನ್ನಾಗಿಯೇ ಬಡಿದಿತ್ತು. ಆತ ಮೇಲರಿಮೆ, ಕೀಳರಿಮೆಗಳ ಮಿತಿಗಳನ್ನು ಮೀರಿ ಶಿಷ್ಟ-ಪರಿಶಿಷ್ಟ ಸಂಸ್ಕೃತಿಗಳನ್ನು ಶೋಧನೆಗೆ ಗುರಿಪಡಿಸುತ್ತಾನೆ. ಗೊಡ್ಡು ಸಂಪ್ರದಾಯಗಳನ್ನು ಖಂಡಿಸಿ ವೈಚಾರಿಕ ನಿಲುವು ತಾಳುತ್ತಾನೆ. 'ಅಹುದಾದರಹುದೆನ್ನಿ ಅಲ್ಲವಾದರಲ್ಲವೆನ್ನಿ ಬಹುಜನರು ನೆರೆ ತಿಳಿದು ಪೇಳಿ ಮಾತಿದನು.' ಇದಲ್ಲವೆ ಅಸಾಧಾರಣವಾದ ಜನತಾಂತ್ರಿಕ ನಿಲುವು! ಕನಕ ದಾಸನ ಸಾಹಿತ್ಯ ಮಧ್ಯಯುಗದ ವರ್ಗ/ಜಾತಿ ಕಲಹಗಳ ಜೀವಂತ ಸಾಕ್ಷಿಯಾಗಿದೆ. ವೇದಾಗಮಗಳ ದರ್ಶನ ಸಾರವನ್ನು ಅಚ್ಚಗನ್ನಡದ ಮೂರು ಮಾತುಗಳಲ್ಲಿಯೇ ಭಟ್ಟಿ ಇಳಿಸಿ, 'ನಾನು ಹೋದರೆ ಹೋಗಬಹುದು' ಎಂಬ ಕನಕನ ನಿರಹಂಕಾರ ವಾಣಿ

ಅವನ ನಮ್ರ ಮನಸ್ಸಿಗೆ ಹಿಡಿದ ಕನ್ನಡಿ. ಡಾ॥ ರಹಮತ್ ಇವನ್ನೇ ಕನಕದಾಸನ ಸಂಸ್ಕೃತೀಕರಣ ಎಂದು ಕರೆದರೆ. ಕರೆಯಲಿ, ಅಭ್ಯಂತರವಿಲ್ಲ.

೧ ಇಷ್ಟಾಗಿಯೂ ಕನಕದಾಸ ಯಾವ ಸಂಸ್ಕೃತೀಕರಣಕ್ಕೂ ಒಳಗಾಗಲಿಲ್ಲವೆಂದು ಹೇಳಿದರೆ ಅತಿಶಯವಾಗುತ್ತದೆ. ಅವನಲ್ಲಿಯೂ ಕೆಲವು ದಂದ್ವಗಳಿವೆ ಆತ ಒಮ್ಮೆ ದುರ್ಗಿ, ಚೌಡಿ ಮುಂತಾದ ಕ್ಷುದ್ರ ದೇವತೆಗಳನ್ನು ತಿರಸ್ಕರಿಸಿದರೆ, ಇನ್ನೊಮ್ಮೆ 'ನಾವು ಕುರುಬರು' 'ದೇವಿ ನಮ್ಮ ದ್ಯಾವರು ಬಂದರು' ಎಂದು ಎಲ್ಲವನ್ನು ತಬ್ಬಿ ಕೊಳ್ಳುತ್ತಾನೆ ಆಡು ಮಾತಿನಿಂದ ಗಮ್ಮೆನ್ನುವ ಅವನ ಕೆಲವು ಕೀರ್ತನೆಗಳಲ್ಲಿ ಕೆಳ ಸಂಸ್ಕೃತಿಯ ಸ್ವರೂಪ ದರ್ಶನವಾಗುತ್ತದೆ, ನಿಜ. ಆದರೂ 'ಭೂಸುರತ್ವವ ಹ್ರಾಸ ಮಾಡಿದ ಫಲ ಏಸೇಸು ಜನುಮಕೆ ಬಿಟ್ಟೀತೆ ?' ಎಂದೂ ಕೇಳುತ್ತಾನೆ. ವರ್ಣ ವ್ಯವಸ್ಥೆಯ ಕರ್ಮಸಿದ್ಧಾಂತದ ಮೊಳೆಗಳು ಇವನ ಕೀರ್ತನೆಗಳಲ್ಲಿ ಹಣೆಗೆ ಬಂದು ಬಡಿಯುತ್ತವೆ. ಇಂಥ ಕಡೆ ಸಂಸ್ಕೃತೀಕರಣಕ್ಕೊಳಗಾಗಿದ್ದಾನೆ ಎನ್ನದೆ ವಿಧಿ ಇಲ್ಲ. "ಕನಕನಿಗೆ ವೈದಿಕ ಫಿಲಾಸಫಿಯೊಂದಿಗೆ ಸಾಮರಸ್ಯವಿರಲಿಲ್ಲ" ಎಂಬ ಬಂಜಗೆರೆ ಜಯಪ್ರಕಾಶರ ಮಾತು ಹೇಗೆ ಅನ್ಯಾಯವಾಗುತ್ತದೊ ತಿಳಿಯದು. ಅಸಂಗ್ರಹದ ಮಾತನ್ನಾಡುತ್ತಲೇ ಬಂಡವಾಳಶಾಹೀ ಕಾರ್ಯದಲ್ಲಿ ತತ್ಪರವಾಗುವ ವೈದಿಕ ಧರ್ಮದ ವೈರುಧ್ಯ ಕನಕದಾಸನಲ್ಲೂ ಉಂಟು ಎಂದು ಮಾತ್ರ ಒಪ್ಪಿಕೊಳ್ಳಬಹುದು. ಕೊನೆಗೂ ಸಂಸ್ಕೃತೀಕರಣವನ್ನು ಅಳೆಯುವ ಮಾನ ದಂಡ ಯಾವುದು ಎಂದು ಕೇಳಬೇಕಾಗುತ್ತದೆ.

೨ ದಾಸಯ್ಯನನ್ನು ಆ ಕಾಲಕ್ಕೆ ಯಾರೂ ಆದರಿಸುತ್ತಿರಲಿಲ್ಲ; ಪರಿಹಾಸ್ಯ ಮಾಡುತ್ತಿದ್ದರು; ಆದ್ದರಿಂದ 'ಪ್ರಾಪ್ತ ಕರ್ಮ'ವನ್ನು ಧಿಕ್ಕರಿಸಿ ದಾಸನಾದ-ಎಂದು ಮುಂತಾಗಿ ಜಯ ಪ್ರಕಾಶ ಹೇಳುತ್ತಾರೆ. ಆದರೆ, 'ಊರಿಗೆ ಬಂದ ದಾಸಯ್ಯ' 'ದಾಸದಾಸರ ಮನೆಯ ದಾಸಿಯರ ಮಗ ನಾನು' ಎಂಬ ಕೀರ್ತನೆಗಳನ್ನು ನೋಡಿದರೆ 'ದಾಸಯ್ಯ' ನೆಂಬ ಶಬ್ದ ಗೌರವಪೂರ್ಣವೇ ಆಗಿದೆ. 'ಜಂಗಮನೆಂದರೆ ಕೂಡಲ ಸಂಗಮ' ಎಂಬ ಪರಿಕಲ್ಪನೆ ಹೇಗೊ 'ದಾಸನೆಂದರೆ ಆದಿಕೇಶವರಾಯನೇ' ಎಂಬ ಪೂಜ್ಯ ಭಾವನೆ ಆ ಕಾಲಕ್ಕೆ ಇದ್ದಿತು. ಪರಿಹಾಸ್ಯದ ಮಾತೇನಿದ್ದರೂ ಈ ಕಾಲಮಾನದ್ದು. ಆದರೂ, ಕನಕದಾಸನಲ್ಲಿ ಸೃಜನಶೀಲ ಪ್ರತಿಭೆ ಅಪಾರವೇ ಇತ್ತು. ಅದು ಅವನ ಕೀರ್ತನೆಗಳಿಗಿಂತ ಕಾವ್ಯಗಳಲ್ಲಿ ಚೆನ್ನಾಗಿ ವ್ಯಕ್ತವಾಗಿದೆ. ಅವನ ಕವಿಚೇತನ ಸದಾ ದ್ವಂದ್ವದಲ್ಲಿ ಮಿಡಿಯುತ್ತದೆ, ಬಿಡುವಿಲ್ಲದೆ ದುಡಿಯುತ್ತದೆ. ಆದ್ದರಿಂದಲೇ ಕನಕನ ಕೀರ್ತನೆಗಳಿಗಿಂತ, ಅವನ ಕಾವ್ಯಗಳೇ ಹೆಚ್ಚು ಮುಖ್ಯವಾಗುತ್ತವೆ ನಮಗೆ.

೩ ಕನಕದಾಸನಿಗೆ 'ದೀಕ್ಷೆ' ಆಗಿತ್ತೆ ಎಂಬ ಮಾತು ಬಂತು. ದೀಕ್ಷೆಯೂ ಸಂಸ್ಕೃತೀ ಕರಣಕ್ಕೆ ಸಂಬಂಧಿಸಿದ ಮಾತೇ. ಬಹುಶಃ ಕನಕದಾಸನಿಗೆ ದೀಕ್ಷೆ ಆಗಿರಲಿಕ್ಕಿಲ್ಲ,

ಯಾಕೆಂದರೆ, ಅವನು ಇಂಥ ದೀಕ್ಷಾ ವಿಧಿಗಳಿಗೇ ವಿರೋಧಿ, ಇಲ್ಲ, ಅವನಿಗೆ ವೈದಿಕರು ದೀಕ್ಷೆ ನೀಡಲು ಒಪ್ಪಿರಲಿಕ್ಕಿಲ್ಲ. ಉಗ್ರಗಾಮೀ ಭಿನ್ನ ಮತೀಯ ಭಕ್ತರು ವ್ಯಾಸರಾಯರು ನೀಡಬಹುದಾಗಿದ್ದ ಕನಕನ ದೀಕ್ಷೆಯನ್ನೇ ತಡೆದಿರಲೂ ಬಹುದು. ಉಡುಪಿಯ ದೇವಾಲಯಕ್ಕೆ ಬಿಡದೆ ತಡೆದ ಜನ ಇನ್ನು ದೀಕ್ಷೆಯನ್ನು ಸ್ವೀಕರಿಸಲು ಬಿಡುವರೆ !

ಇಲ್ಲಿ ಒಂದು ಮಾತು: ಆಧುನಿಕ ಕಾಲದಲ್ಲಿ ಪುರಂದರ ದಾಸನ ಜಯಂತ್ಯಾದಿ ಉತ್ಸವಗಳನ್ನು ಅದ್ದೂರಿಯಿಂದ ಮಾಡುವ ಇವತ್ತಿನ ವೈದಿಕ ಭಕ್ತಿಪಂಥ ಕನಕದಾಸನನ್ನು ಅಸ್ಪೃಶ್ಯನೊ–ಎಂಬಂತೆ ದೂರ ಇಟ್ಟಿರುವುದು ಮುಚ್ಚು ಮರೆಯ ಸಂಗತಿ ಏನಲ್ಲ. ಇದಕ್ಕೆ ಸಮಾನಾಂತರವಾಗಿ ಅತ್ತ ಕುರುಬ ಜನಾಂಗ ಕಾಳಿದಾಸ, ಕನಕದಾಸ ಇವರು ನಮ್ಮವರು ಎಂದು ತಬ್ಬಿಕೊಂಡು ಹೊಸದಾಗಿ ಮಠ ಮಾನ್ಯಗಳನ್ನು ಕಟ್ಟಿಕೊಳ್ಳುತ್ತ, ಜಗದ್ಗುರುಗಳನ್ನು ಸೃಷ್ಟಿಸಿಕೊಳ್ಳುತ್ತ, ದಾಸ ಮಠಗಳೊಂದಿಗೆ ಪೈಪೋಟಿಗೆ ಹೊರಟಿರುವುದು ಒಂದರ್ಥದಲ್ಲಿ ಅವರ ಕೀಳರಿಮೆಯ ಸಂಸ್ಕೃತೀಕರಣವನ್ನೇ ಸೂಚಿಸುತ್ತದೆಯಲ್ಲವೆ ? ಈಗ ಆರ್ಥಿಕವಾಗಿ ಹಿಂದುಳಿದವರು ಎಂದು ಸರ್ಕಾರಕ್ಕೆ ಅರ್ಜಿ ಸಲ್ಲಿಸುತ್ತ, ಇತ್ತ ಸಮಾಜಿಕವಾದ ಸ್ಥಾನಮಾನಗಳಿಗೆ ಕ್ಲೇಶಪಡುತ್ತ ಭವಣೆ ಪಡುವ ಜನರಲ್ಲಿ ಮುಖ್ಯವಾಗಿ ಕಾಣುವುದು ವೈಚಾರಿಕತೆಯ ಅಭಾವ ಮಾತ್ರ.

## ಕನಕನ ಕಿಂಡಿ

ಉಡುಪಿಯ ಕನಕನ ಕಿಂಡಿ ಪವಾಡದಿಂದ ಆಗಿರಲಿಕ್ಕಿಲ್ಲ. ಎನ್ನುವ ಬಂಜಗೆ ಜಯಪ್ರಕಾಶ್ ಅವರು 'ಕನಕ ಪ್ರತಿಮೆಯನ್ನು ಕದ್ದ, ನಂತರ ಒಪ್ಪಂದವಾಯಿತು, ಕಾಲಾನುಕ್ರಮದಲ್ಲಿ' ಎಂಬ ತೀರ್ಮಾನಕ್ಕೆ ಬರುತ್ತಾರೆ. ಇದಂತೂ ಅಸಾಧಾರಣವಾದ ಊಹೆ. ಕನಕದಾಸನನ್ನು ಇವತ್ತಿನ ಉಗ್ರಗಾಮಿಗಳ ಸಾಲಿಗೆ ನಿಲ್ಲಿಸಿದಂತೆ ಕಾಣುತ್ತದೆ. ಇದೇ ಊಹೆಯ ಬೆನ್ನು ಹತ್ತಿ ಆಗ ಅವನ ಕೊಲೆಯೇ ನಡೆದಿರಬಹುದು. ಎಂದೂ ಹೇಳಬಹುದಲ್ಲ; ಅಮಾತಿರಲಿ. ಅದರೆ, ಈ ಎಲ್ಲ ಊಹೆಗಳಿಗೆ ಏನಾದರೂ ಆಧಾರ ಬೇಕಲ್ಲ. ಆದ್ದರಿಂದ ಕನಕನ ಕಿಂಡಿಯನ್ನು ಇನ್ನೂ ಬೇರೆ ಬೇರೆ ಆ್ಯಂಗಲ್‌ಗಳಲ್ಲಿ ನೋಡಬಹುದೆ, ನೋಡಿ;

**ಮೊದಲು,** ಕದ್ದಿರುವುದು, ಆಮೇಲೆ ಒಪ್ಪಂದಕ್ಕೆ ಬಂದಿರುವುದು ಸಾಧ್ಯವಿಲ್ಲದ ಮಾತು. ಏಕೆಂದರೆ ವಿಗ್ರಹವು ಕಳವಾದರೆ ಅಥವಾ ಭಿನ್ನವಾದರೆ ಆ ದೇವಾಲಯಕ್ಕೆ ಪೂಜೆ ಸಲ್ಲುವುದಿಲ್ಲ. ಉದಾ ಗೆ: ಸೋಮನಾಥ ದೇವಾಲಯ, ಕಪ್ಪೆಚೆನ್ನಿಗನ ದೇವಾಲಯ. ಒಪ್ಪಂದಕ್ಕೆ ಬಂದಿರುವುದು ಇನ್ನೂ ಸಾಧ್ಯವಿಲ್ಲದ ಮಾತು, ೨೦ನೇ

ಶತಮಾನದ ಈ ವೈಚಾರಿಕ ಯುಗದಲ್ಲೂ ಮಂದಿರ-ಮಸೀದಿಗಳ ಬಗ್ಗೆ ಒಂದು ಒಪ್ಪಂದಕ್ಕೆ ಬಾರದ ಮತೀಯ ಉಗ್ರಗಾಮಿಗಳಿಗಿರುವಾಗ ಮಧ್ಯಯುಗದಲ್ಲಿ ಇದೆಲ್ಲ ಸಾಧ್ಯವಿತ್ತೇ ? ಊಹೆಗೂ ನಿಲುಕುವುದಿಲ್ಲ. ಎರಡನೆಯದಾಗಿ, ಇವತ್ತಿನ ಉಡುಪಿಯ ಕೃಷ್ಣಮಂದಿರ ಹಿಂದೆ ಯಾರದೋ ಖಾಸಗಿ ಮನೆಯಾಗಿರಬೇಕು; ಕಾಲಾಂತರದಲ್ಲಿ ಅದು ಒಂದು ಪವಿತ್ರ ಸ್ಥಳವಾಗಿ ಮನೆಯ ಭಕ್ತರಿಂದ ಪ್ರಸಿದ್ಧಿ ಪಡೆದಿರಬೇಕು; ಆ ಮೇಲೆ ಅವರು ತಮ್ಮ ಮನೆಯನ್ನು ಬಿಟ್ಟು ಕೊಟ್ಟು ಬೇರೆ ಕಡೆಗೆ ನೆಲಸಿರಬೇಕು; ಮನೆಯು ದೇವಾಲಯವಾಗಿ ಮಾರ್ಪಾಟಾಯಿತು. ವಿಸ್ತಾರವಾಯಿತು. ಗರ್ಭ ಗೃಹ ಮಾತ್ರ ಹಾಗೇ ಉಳಿಯಿತು. ಮನೆಗೆ ದೇವರ ಮನೆಯಾಗಿದ್ದಾಗ್ಗೆ, ಅದಕ್ಕೆ ಬಿಟ್ಟುಕೊಂಡಿದ್ದ ಗಾಳಿ-ಬೆಳಕಿನ ಕಿಟಕಿಗೆ ಕಾಲಕ್ರಮದಲ್ಲಿ ಕತೆ ಹುಟ್ಟಿರಬೇಕು: ಆ ಕತೆಗೆ ಕಾಲು ಬಂದು ಈ ಕುರುಬನಾದ ಕನಕನ ಕತೆಗೆ ಆಮೇಲೆ ಕಟ್ಟಲ್ಪಟ್ಟಿರಬೇಕು. ದಂತ ಕತೆಯಾಯಿತು ಹೀಗೆ, ಇರಲಿ. ಮೂರನೆಯದಾಗಿ, ಮೇಲು ಕೋಟೆಯಲ್ಲಿ ರಾಮಾನುಜರು ವರ್ಷಕ್ಕೊಮ್ಮೆ ಅಸ್ಪೃಶ್ಯರಿಗೆ ದೇವಸ್ಥಾನ ಪ್ರವೇಶಕ್ಕೆ ಅವಕಾಶ ಮಾಡಿಕೊಟ್ಟದ್ದು ಸಂಪ್ರದಾಯವಿತ್ತಷ್ಟೆ. ಇದು ಉಡುಪಿಯ ಮಾಧ್ವ ಮತಸ್ಥರಿಗೆ ಸಮಸ್ಯೆಯಾಗಿ ಕಾಡಿ, ಅಸ್ಪೃಶ್ಯರನ್ನು ಹೇಗೆ ಮೆಚ್ಚಿಸಿಕೊಳ್ಳಬೇಕೆಂಬ ಯೋಚನೆ ಬಂತು. ಅಗ ಬುದ್ಧಿವಂತ ಮಾಧ್ವರು (Double-Intelligent) ಒಂದೇ (ಕಿಂಡಿ) ಕಲ್ಲಿನಲ್ಲಿ ಎರಡು ಹಕ್ಕಿಗಳನ್ನು ಹೊಡೆದರು! ದೇವಾಲಯ ನಿರ್ಮಾಣ ಸಂದರ್ಭದಲ್ಲಿಯೇ ಪ್ರತಿಮೆಯನ್ನು ತಿರುಗಿಸಿಟ್ಟು, ಕಿಂಡಿಯನ್ನು ಬಿಟ್ಟು, ಅಸ್ಪೃಶ್ಯರಿಗೆಲ್ಲ ಕೃಷ್ಣ ದರ್ಶನವನ್ನು ಮಾಡಿಸಿಕೊಟ್ಟರು, ಇತ್ತ ದೇವಾಲಯದ ಅವರ ಪ್ರವೇಶವನ್ನು ಜಾಣತನದಿಂದ ನಿಷೇಧಿಸಿ ತಮ್ಮ ಮಡಿವಂತಿಕೆಯನ್ನು ಉಳಿಸಿಕೊಂಡರು. ಇಷ್ಟಾಯಿತು.

ಅಂತೂ ಕನಕನ ಕಿಂಡಿಯ ಮೇಲು ಸಂಸ್ಕೃತಿಯ ಅಂತರಂಗದೊಳಕ್ಕೆ ಕೆಳ ಸಂಸ್ಕೃತಿಯವರು ಯಾವಾಗಲಾದರೊಮ್ಮೆ ನೋಡಬಹುದಾದ ಒಂದು ಕಳ್ಳ ಕಿಂಡಿಯಾಯಿತು. ಅದು ಮಾಧ್ವರ (ಸೀಳುವ) ನಿಗೂಢ ಅಂತರಂಗಕ್ಕೂ ಮತ್ತು ಶೂದ್ರರ ಕೀಳರಿಮೆಯ ದೈನ್ಯ ನೋಟಕ್ಕೂ ಶಾಶ್ವತ ಸಂಕೇತವಾಗಿ ಉಳಿದುಬಂದಿತು. ಎಂಥ ವಿಪರ್ಯಾಸ! ●

## ಶಂಕರ ಕುಕನೂರ

# ನಮ್ಮೀ ಅವತಾರ

ಆದಿ ಅನಾದಿ ಕಾಲದಿಂದಲೂ
ಈ ನೆಲ ಬರೀ ಬೆವರು ಕುಡಿದು ಬದುಕಿಲ್ಲ:
ಆಗಾಗ ರಕ್ತ ಚೆಲ್ಲಿದೆ, ರಕ್ತ ಕುಡಿದಿದೆ.
ಅದೂ ನಮ್ಮ ರಕ್ತ: ಬಡವರ ರಕ್ತ.

ಬಲು ಅಗ್ಗವೆಂತಲೋ ?
ರುಚಿಕಟ್ಟಾಗಿದೆ ಅಂತಲೋ ?
ಕುಡಿದಿದೆ, ಕುಡಿಯುತ್ತಲೇ ಇದೆ.

ಯಾಕಂದರೆ ಸಿರಿವಂತರ ರಕ್ತ
ಹೆಪ್ಪುಗಟ್ಟಿ ದಪ್ಪವಾಗಿರುತ್ತದೆ.
ಪಾಪ! ಅದನ್ನೇ ಕುಡಿದರೆ ಗಂಟಲಲ್ಲಿ
ಸಿಕ್ಕಿ ಸಾವು ಸಂಭವಿಸಬಹುದು!

ಆದರೆ ನಮಗೆ ಇಲ್ಲಿ ಬದುಕೇ ಮುಖ್ಯ: ಸಾವಲ್ಲ.
ಹಸಿದವರು ಬದುಕಬೇಡವೆ ?
ಮುಗಿಲು ಹರಿದು ಬಿದ್ದರೂ ಸರಿ
ಸಿಡಿಲೆರಗಿ ಬೆಟ್ಟಗಳ ಸೀಳಿದರೂ ಸರಿ
ನಾವು ಬದುಕಬೇಕು.
ನಾವ್ಯಾರೂ ಸಾಯಲು ಸಿದ್ಧರಿಲ್ಲ.

ದಿನಾಲೂ ಸಂಜೆ ಬರುತ್ತದೆ-
ಸಿಂಧೂರ ತರುತ್ತದೆ, ಅದಕ್ಕೆ ಪಡುವಣದ–
ಕ್ಷಿತಿಜ– ಬಿಟ್ಟರೆ ಬೇರೆ ತಾಣವೆಲ್ಲಿದೆ ?

ಇಲ್ಲಿ ನೆಲ-ನೆಲೆ ಇಲ್ಲದವರು ಬಹಳುಂಟು:
ಅವರಲ್ಲಿ ಈಗ ಬರೀ ಎಲುಬುಂಟು.
ಆಗಲೇ ಮಾಂಸಖಂಡಗಳ ಕಿತ್ತುಕೊಂಡಾಗಿದೆ.
ರಣಹದ್ದುಗಳ ದಂಡು ದುಂಡಗಾಗಿದೆ.

ಅಂದು ಬಾಹುಬಲಿ ತಾನು ಗೆದ್ದರೂ
ತನ್ನ ರಾಜ್ಯ ತಮ್ಮ ಭರತನಿಗೇ ಬಿಟ್ಟುಕೊಟ್ಟ:
ಎಷ್ಟು ಸರಳ ವಿಧಾನ!

ನಾವು ನೆಲ-ನೆಲೆಯಿಲ್ಲದವರು-
ಕೇಳಿದ್ದರೆ ನಮಗೇ ಕೊಡುತ್ತಿದ್ದನೇ ?
ಬಹುಶಃ ನಮ್ಮನ್ನು ನೆಲದಲ್ಲಿ—
ಉತ್ತಿಬಿತ್ತಿ ಬೆಳೆ ಬೆಳೆಯುತ್ತಿದ್ದರು.
ಎಷ್ಟೇ ಆದರೂ ಅವರ ವಂಶಸ್ಥರೇ ಅಲ್ಲವೇ ಇವರು ?

ಈಗ ನಾವು ನಡೆದ ಈ ಹಾದಿ
ಸದಾ ಕಲ್ಲು ಮುಳ್ಳಿನದು-
ದುಡಿದವರ ಕೈತುತ್ತ ಕಸಿವವರು
ನಮ್ಮ ಬಾಯಿಗೆ ಕಚ್ಚೆ ಬಿಚ್ಚಿ,
ಉಚ್ಚೆ ರಾಡಿ ಕಲಸಿ ತುರುಕುತ್ತಾರೆ.

ಹೀಗಿದ್ದೂ—ಈಗಲೂ......
ಓದಲು, ಬರೆಯಲು, ಪಠಿಸಲು
ಅವರದೇ ಚರಿತ್ರೆ ಬೇಕೆ ?
ರಾಜ, ರಾಣಿ, ಚಕ್ರಪಾಣಿ, ಕತ್ತಿ, ಗುರಾಣಿ—
ಹಿರಿದು ಹೋರಾಡಿದ್ದೇ ಆಗಬೇಕೆ ?
ಅದೂ ಹೆಣ್ಣು ಹೆಂಡಕ್ಕಾಗಿ
ತಮ್ಮ ತೀಟೆ ತೆವಲಿಗಾಗಿ ಮಾತ್ರ.
ನಮಗಾಗಿ ನಮ್ಮ ತುತ್ತಿಗಾಗಿ
ಅವರ್ಯಾರೂ ಹೋರಾಡಿದ್ದು ಹಾರಾಡಿದ್ದು
ಕೇಳಿ ಗೊತ್ತಿಲ್ಲ.

ಇಂದು ನಾವು ನೀವು ಕೂಡಿ ಓದುವ
ಚರಿತ್ರೆ ಇದು:

ಅದಕ್ಕೆಂದೇ ಹೇಳುತ್ತಾರೆ–
ಬೂದಿಯು ರಾಸಿ ಎಂದೂ ಕೆಂಡವಾಗುವದಿಲ್ಲ,
ಕೆಂಡದಿಂದಲೇ ಬೂದಿಯಾಗುತ್ತದೆ.

ಈಗೀಗ ಈ ನೆಲದ ಬಣ್ಣವೇ
ನಮ್ಮನ್ನು ಮೆತ್ತಿಕೊಂಡಿದೆ.
ಈ ನೆಲ ಜಲ ನಮ್ಮನ್ನೇ ನೆಚ್ಚಿಕೊಂಡಿದೆ.

ಈ ಭವ್ಯ ಭರತಖಂಡದಲ್ಲಿ—
ದೇವರು ಸಾವಿರ ಸಲ, ಸಾವಿರ ಥರ
ಅವತಾರವೆತ್ತಿದ್ದಾನಂತೆ!
ಈಗ ಯಾಕೋ ಅವನ ಸುಳಿವೇ ಸಿಗುತ್ತಿಲ್ಲ!

ಆಗಿನಂತೆ ಈಗ ಕೀಚಕ-ಪಾಚಕ,
ಮಾರೀಚರಿಲ್ಲವೇ? ಕುಂಭಕರ್ಣ, ರಾವಣಾ-
ಸುರರಿಲ್ಲವೇ ?
ಇದ್ದಾರೇ ಎಲ್ಲರೂ ಇದ್ದಾರೆ.
ಅವನೇ ಸೃಷ್ಟಿಸಿದ ಈ ಬೇಲಿ ಅವನನ್ನೇ
ನುಂಗಿ ನೀರು ಕುಡಿದಿದೆ.

ಈಗ ಏನಿದ್ದರೂ ಅದು ನಮ್ಮ 'ಅವತಾರ'
ನಮ್ಮೀ ಅವತಾರ ಕೊನೇ ಅವತಾರ.

ಬಿ. ಪೀರ್ ಬಾಷ

---

## ಹಳೆಯ ಗಿರಾಕಿ

ಅಂದೊಮ್ಮೆ
ಕದ ಮುರಿದು ಒಳಬಂದವರಿಗೆ
ಮೈಯೊಪ್ಪಿಸಿದ–ಭಾರತಿ.
ಮತ್ತೆ
ಪುತು ಪುತು ಹೆತ್ತ ಕೂಸುಗಳ

ಗಂಜಿಗಾಗಿ,-ಅಲ್ಲ,
ಬಿರ್ಲಾವಂಶದ ಮಕ್ಕಳಂಗಿಯ
ಬಣ್ಣದ ಗುಂಡಿಗಾಗಿ
ಚಿನ್ನದ ನಕಲೇಸು ಒತ್ತೆ ಇಟ್ಟಿದ್ದಾಳೆ.
ಸಾಲಕೊಟ್ಟ ಡಾಲರ ಶೆಟ್ಟಿ
ಜಡೆಹಿಡಿದು ನಗುತ್ತಾನೆ.
ಮುಟ್ಟಿ ನೋಡುತ್ತಾಳೆ
ಓಲೆ, ಮೂಗುತಿ, ಡಾಬು, ಪಿಲಕಿಗಳೆಲ್ಲಾ ಲೂಜು.

ಮ್ಯಾಂಗನೀಸ ಮೊಲೆತೊಟ್ಟು
ಮೆತ್ತಗಾಗಿ, ಸಪ್ಪಗಾಗಿ
ಜೋತು ಬೀಳುತ್ತವೆ ಕರಗಿ.

ಚಿಡ್ಡಿತೊಟ್ಟ ಮುದ್ದಿನ ಮಗ ಪಿಸುನುಡಿದ:
"ಅಮ್ಮಾ...ನಿನ್ನ ಸಂಸ್ಕೃತಿ...ಇತಿಹಾಸ...
ದೊಡ್ಡದಂತೆ, ನೀನು ಒಳ್ಳೆಯವಳಂತೆ......
ವಿಕ್ಟೋರಿಯಾ, ಎಲಿಜಬೆತ್
ಆಂಟಿ ಹೇಳಿದರು."
ತಾಯಿ ಹೇಳಿದ್ದು:
"ಹೌದು ಮಗು ನಾನು ಬಹು ಸುಂದರಿ
ಯಾಗಿದ್ದೆ ಆಗ."
ಸಮತೆ ಬಯಸುವ ತಾಯಿ
ಕೆಲಸ ಹಂಚಿದ್ದಳು.
ದುಡಿವ ಹಿರಿಮಗ ನೆಲಕ್ಕಂಟಿದ್ದ.
ಇನ್ನೊಬ್ಬನಿಗೆ "ಕಾಂಟೆಸಾ" ಕಾರು.
[ಅಮ್ಮನ ಮಾಜೀ ಪ್ರಿಯಕರೆ
ಕಾಣಿಕೆಯಾಗಿ ಕೊಟ್ಟಿದ್ದು]

ಗಂಟೆಗಾಗಿ ಗಂಟೆ ಬಾರಿಸುವ
ಕಾಂಟ್ರ್ಯಾಕ್ಟ್ ಗಿರಿ.
ಚಡ್ಡಿಯ ಗಿಡ್ಡ ಮಗನಿಗೆ.
ಮುಖದಲಿ ಅಮ್ಮನದೇ ಛಾಪು-

ಆತ ಪುಟ್‌ಪಾತಿನಲಿ
ಕಂಪ್ಪೆ ಎಣಿಸುತ್ತಿದ್ದ.

ಅಮ್ಮನಿಗೆ ಮೈತುಂಬಾ ಗೀಚುಗಳು
ಎಲ್ಲೆಲ್ಲೋ ರಕ್ತದ ಕಲೆ.
ಹೇತು ರವಾಡಿಸಿದ ಗಬ್ಬು ವಾಸನೆ.
ಸುಕ್ಕುಗಟ್ಟಿದ ಜಿಡ್ಡು ಚರ್ಮ
ಇನ್ನೂ ಅಲ್ಲಲ್ಲಿ ಗುಳ್ಳೆಗಳು.
ಕೀವೊಡೆಯುವ ಬಾಧೆ.

ಸುಂದರಿ ಭಾರತಿ!—
ಗೆ
ಕಣ್ಣ ಮುಂದೆ ಯೌವನದ
ಸಲ್ಲಾಪ,
ಗಕ್ಕನೆ
ಭಯತುಂಬಿದ ಭವಿತವ್ಯದ ಚಿಂತೆ.

ಕಾಲಿನ ಕೀಲು ಮುರಿದುಕೊಂಡ
ತಾಯಿ-ಬಟಾಬಯಲಿನಲ್ಲಿ
ಒಬ್ಬಂಟಿ.

ಕಂಗಳಲ್ಲಿ ನೇರದೃಷ್ಟಿ
ಆಕಾಶದತ್ತ.

ಅಲ್ಲಿ—ಹಾರುವ ಹದ್ದು.
ಇದರತ್ತಲೇ ಕಣ್ಣು.
ಹಳೆಯ ಗಿರಾಕಿ.

# ಮುಟ್ಟಿನ ಪುರಾಣ

## ಸಂಜೀವ ಕುಲಕರ್ಣಿ

೧೨ ಡಿಸೆಂಬರ್ ೧೯೯೧ ರಂದು ರಾತ್ರಿ ಟೀವಿಯಲ್ಲಿ ಸುದ್ದಿ ಪ್ರಸಾರವಾಗುತ್ತಿದ್ದಾಗ ಪಾಕಿಸ್ತಾನದಲ್ಲಿ ಆದ ಒಂದು ಬಲಾತ್ಕಾರದ ವಿರುದ್ಧ ಅಲ್ಲಿಯ ಹೆಂಗಸರು ತೆಗೆದ ಮೆರವಣಿಗೆಯನ್ನು ತೋರಿಸಿದರು. ಸುದ್ದಿ ನೋಡುತ್ತ ಕುಳಿತಿದ್ದ ನಮ್ಮೊಳಗೆ ಕೂಡಲೇ ಚರ್ಚೆ ಸುರುವಾಯಿತು. "ಮುಸ್ಲಿಂ ಹೆಂಗಸರಲ್ಲಿ ಬುರ್ಖಾ ಹಾಕುವ ಪದ್ಧತಿ ಇನ್ನೂ ಇದೆ. ಈ ಬುರ್ಖಾ ಪದ್ಧತಿ ಬಹಳ ಕೆಟ್ಟದಾದದ್ದು. ಈ ಊರಿನಲ್ಲಿ ಒಬ್ಬ ಮುಸ್ಲಿಂ ಪ್ರೊಫೆಸರ್ ಇದ್ದಾಳಂತೆ. ಅವಳು ಕೂಡ ಇಂದಿಗೂ ಸಂಬಂಧಿಕರ ಮನೆಗೆ ಹೋಗುವಾಗ ಬುರ್ಖಾ ಹಾಕಿಕೊಂಡೇ ಹೋಗಬೇಕಂತೆ" ಅಂದರು ಒಬ್ಬರು. "ಈ ಬುರ್ಖಾ ಪದ್ಧತಿ ಮುಸ್ಲಿಂ ಹೆಂಗಸರಿಗೆ ಸ್ವಾತಂತ್ರ್ಯ ಬಹಳ ಕಡಿಮೆ ಅನ್ನುವದರ ದ್ಯೋತಕ" ಅಂದರು ಇನ್ನೊಬ್ಬರು. ನಾನು ಒಂದು ಕ್ಷಣ ವಿಚಾರ ಮಾಡಿ ಹೇಳಿದೆ. "ಹೌದು ಬುರ್ಖಾ ಪದ್ಧತಿ ಖಂಡನೀಯವಾದದ್ದೇ. ಆದರೆ ಇದು ನಮ್ಮ ಸಮಾಜದೊಳಗಿನ ಅನೇಕ ಸ್ತ್ರೀವಿರೋಧಿ ಮೌಲ್ಯಗಳು ಮತ್ತು ಪದ್ಧತಿಗಳಲ್ಲಿ ಒಂದು ಮಾತ್ರ ಇನ್ನೂ ಹಲವಾರು ಇವೆ" ಎಂದೆ. "ಅಂದರೆ" ? ಎಂದು ಕೇಳಿದರೊಬ್ಬರು. ನಾನು ಹೇಳಿದೆ. "ಉದಾಹರಣೆಗೆ ಬ್ರಾಹ್ಮಣರ ಹೆಂಗಸರಲ್ಲಿ ಮುಟ್ಟಾದಾಗ 'ಹೊರಗೆ' ಕೂಡುವ ಪದ್ಧತಿ ಇದೆಯಲ್ಲ, ಅದಕ್ಕೆ ಏನಾದರೂ ಸಮರ್ಥನೆಗಳಿವೆಯೇ ?" ಅವರು ತಮಗೆ ಗೊತ್ತಿದ್ದ ಸಮರ್ಥನೆಗಳನ್ನು ಕೊಡಲು ಪ್ರಯತ್ನಿಸಿದರು. ಚರ್ಚೆ ಸ್ವಲ್ಪ ಹೊತ್ತು ಹೀಗೆಯೇ ಸಾಗಿ ಕೊನೆಗೊಂಡಿತು. ಚರ್ಚೆಯಿಂದ ಆದದ್ದೆಂದರೆ ನನ್ನ ತಲೆಯಲ್ಲಿ ಬಹಳ ದಿನಗಳಿಂದಲೂ ಕೊರೆಯುತ್ತಿದ್ದ ಕೆಲವು ವಿಚಾರಗಳು ಥಗ್ಗನೆ ಮೇಲೆದ್ದು ಬಂದುಬಿಟ್ಟವು. ಅವುಗಳನ್ನು ಈ ಲೇಖನದಲ್ಲಿ ಹೇಳಲು ಪ್ರಯತ್ನಿಸಿದ್ದೇನೆ.

ನಮ್ಮ ದಿನನಿತ್ಯದ ಬಾಳಿನಲ್ಲಿ ಅನೇಕ ಸ್ತ್ರೀವಿರೋಧಿ ಮೌಲ್ಯಗಳು, ಪದ್ಧತಿಗಳು ಇವೆ. ಅವು ನಮ್ಮ ಬಾಳಿನಲ್ಲಿ ಎಷ್ಟೊಂದು ಹಾಸುಹೊಕ್ಕಾಗಿವೆಯೆಂದರೆ ಈ ಪದ್ಧತಿ-ಮೌಲ್ಯಗಳ 'ಸ್ತ್ರೀವಿರೋಧಿತನ' ನಮಗೆ ಕಾಣಿಸುವದೇ ಇಲ್ಲ. ಅದರಲ್ಲೂ ಯಾವ ಪದ್ಧತಿಗಳ ಆಚರಣೆಯೊಂದಿಗೇ ನಾವು ಬೆಳೆದು ಬಂದಿರುತ್ತೇವೆಯೋ ಅಂತಹವುಗಳ ನಿಜಸ್ವರೂಪ ನಮಗೆ ಸರ್ವಥಾ ಕಾಣುವದಿಲ್ಲ. ಯಾರಾದರೊಬ್ಬರು ಅದನ್ನು ನಮಗೆ ತೋರಿಸಿಕೊಟ್ಟಾಗಲೂ ಅದನ್ನು ಒಪ್ಪಿಕೊಳ್ಳಲು ನಮ್ಮ ಮನಸ್ಸು ಒಲ್ಲೆಯೆನ್ನುತ್ತದೆ. ಇಂತಹ ಪದ್ಧತಿಗಳಿಗೆ ಸಾಮಾನ್ಯವಾಗಿ ಕೊಡಲಾಗುವ ಸಮರ್ಥನೆಗಳನ್ನೇ ಕೊಡಲು ಪ್ರಯತ್ನಿಸುತ್ತೇವೆ. ಸರಿಯಾದ ಚರ್ಚೆ ನಡೆದು ಈ ಸಮರ್ಥನೆಗಳೂ ಟೊಳ್ಳು ಅಂತಾದಾಗಲೂ ನಾವು ಅಷ್ಟು ಸುಲಭವಾಗಿ ಸೋಲೊಪ್ಪಿಕೊಳ್ಳುವದಿಲ್ಲ. ಒಳಗೊಳಗೇ ನಮಗೆ ಕಸಿವಿಸಿಯಾಗುತ್ತದೆ. ಆದರೆ ಇವೆಲ್ಲ ಕ್ಷಣಿಕ ಮಾತ್ರ. ಸ್ವಲ್ಪ ಹೊತ್ತಿನ ನಂತರ ಮತ್ತೆ ಎಲ್ಲವೂ ಮುಂಚಿನಂತೆಯೇ!

ಮುಟ್ಟು ಅಂದರೆ ಏನು ? ಅದೊಂದು ಸಹಜ ಶಾರೀರಿಕ ಪ್ರಕ್ರಿಯೆ. ವಯೋಧರ್ಮಕ್ಕನುಸಾರವಾಗಿ ಎಲ್ಲ ಹೆಂಗಸರೂ ಮುಟ್ಟಾಗುತ್ತಾರೆ. ಇದು ನಡುಹಗಲಿನ ಸೂರ್ಯನಷ್ಟು ಸ್ಪಷ್ಟವಾದ ಸಂಗತಿ. ಆಗಿರುವಾಗಲೂ ಶತಮಾನಗಳಿಂದಲೂ ವಿದ್ಯಾವಂತರೂ ತಲೆಯುಳ್ಳವರೂ ಆದ ಬ್ರಾಹ್ಮಣರಲ್ಲಿ ಮಾತ್ರ 'ಮುಟ್ಟೆಂದರೆ ಅದೇನೊ ಅಶುದ್ಧ' ಅನ್ನುವ ವಿಚಾರ ಇಷ್ಟೊಂದು ದೀರ್ಘಕ್ಕೆ ಹೋಗಿರಲು ಕಾರಣವೇನು ? ಪ್ರತಿ ತಿಂಗಳೂ ಮುಟ್ಟಾದಾಗ ಹೆಂಗಸು ಏನನ್ನೂ ಮುಟ್ಟಬಾರದು, ಯಾರನ್ನೂ ಮುಟ್ಟಿಸಿಕೊಳ್ಳಬಾರದು, ದೇವರ ಪೂಜೆ ಮಾಡಬಾರದು ಅನ್ನುವಂತಹ ಹೇಯ ಪದ್ಧತಿ ಹೇಗೆ ಬೆಳೆದು ಬಂದಿತು ? ದೇವರು ನಮ್ಮೆಲ್ಲರ ಸೃಷ್ಟಿಕರ್ತ ಅನ್ನುವದಾದರೆ ಅವನೇ ನಮಗೆ ಹೀಗೆ ಕೈ, ಕಾಲು, ಕಣ್ಣು, ಮೂಗು ಕೊಟ್ಟು ಹುಟ್ಟಿಸಿದ್ದು ಅಲ್ಲವೆ ? ಹಾಗೂ ಅವನೇ ನಮಗೆ ಕಣ್ಣೀರು, ಉಗುಳು, ಬೆವರು, ಉಚ್ಚೆ, ಹೇಲು, ವೀರ್ಯ ಮತ್ತು ತಿಂಗಳ ರಜಸ್ರಾವ ಕೊಟ್ಟು ಹುಟ್ಟಿಸಿದ್ದು. ಹೀಗಿರುವಾಗ ಬ್ರಾಹ್ಮಣರಿಗೆ ಈ ರಜಸ್ರಾವ ಅಥವಾ ಮುಟ್ಟು ಮಾತ್ರ ಯಾಕೆ ವಿಶೇಷವಾದದ್ದಾಯಿತು ? ಯಾಕೆ ರಜಸ್ರಾವದ ಹೆಂಗಸು ಬಹಿಷ್ಟೆಯಾದಳು ? ನನ್ನ ತೊಡೆಯ ಮೇಲೆ ಉಚ್ಚೆ ಹೊಯ್ಯುವ ಮಗು ನನಗೆ ಅಶುದ್ಧವಾಗುವದಿಲ್ಲ. ಆದರೆ ಆ ದೇವರಿಗೆ ತಾನೇ ಸೃಷ್ಟಿಸಿದ, ತನ್ನ ಮಕ್ಕಳೇ ಆದ ಹೆಂಗಸರು ರಜಸ್ರಾವವಾದಾಗ ಅಶುದ್ಧವಾಗುತ್ತಾರೆ. ದೇವರು ಯಾಕೆ ಹೀಗೆ ಮಾಡುತ್ತಾನೆ ?

ವಿಚಿತ್ರವೆಂದರೆ ಬ್ರಾಹ್ಮಣರಿಗೆ ತಮ್ಮ ಜಾತಿಯ ಹೆಂಗಸರು ಮಾತ್ರ ರಜಸ್ರಾವವಾದಾಗ 'ಅಶುದ್ಧ'ವಾಗುತ್ತಾರೆ. 'ಹೊರಗೆ' ಆಗಬೇಕಾದವರಾಗುತ್ತಾರೆ. ಇತರ

ಜಾತಿಯ ಹೆಂಗಸರು ಅಲ್ಲ. ಮೊಸರು ಮಾರುವ ಮಂಗಮ್ಮನನ್ನು ಬ್ರಾಹ್ಮಣರು ಯಾವತ್ತಾದರೂ ಕೇಳಿದ್ದಿದೆಯೇ 'ನೀನಿವತ್ತು ಮುಟ್ಟಾಗಿದ್ದೀಯಾ ?' ಅಂತ? ಮಂಗಮ್ಮ ಇತರ ದಿನಗಳಲ್ಲಿ ಹೇಗೊ ಹಾಗೆಯೇ ಮುಟ್ಟಾದಾಗಲೂ ಬಾಗಿಲಿಗೆ ಬಂದು ಮೊಸರು ಕೊಡುತ್ತಾಳೆ. ಆ ಮೊಸರು ಮನೆಯವರಿಗೂ ನಡೆಯುತ್ತದೆ, ಮನೆಯ ದೇವರಿಗೂ ನಡೆಯುತ್ತದೆ! ಮನೆಯ ಆಳು ಹೆಂಗಸು ಎಂದಿನಂತೆಯೇ ಮುಟ್ಟಾದಾಗಲೂ ಬಂದು ಸಾಮಾನುಗಳನ್ನು ಎತ್ತಿಟ್ಟು ಕಂಬಳಿ ಜಮಖಾನೆ ಜಾಡಿಸಿ ಕಸ ಉಡುಗುತ್ತಾಳೆ, ಅರಿವೆಗಳನ್ನು ಮಡಿಚಿ ಇಡುತ್ತಾಳೆ, ಮಕ್ಕಳನ್ನು ಆಡಿಸುತ್ತಾಳೆ. ಇದು ಹೇಗೆ ?

ಬ್ರಾಹ್ಮಣ ಹೆಂಗಸರು ಪ್ರತಿ ತಿಂಗಳು 'ಹೊರಗೆ' ಕೂಡುವದು ನಾಲ್ಕು ದಿವಸ ಮಾತ್ರ, ಆದರೆ ಎಲ್ಲ ಹೆಂಗಸರಿಗೂ ಹಾಗೂ ಅನೇಕ ಗಂಡಸರಿಗೂ ಗೊತ್ತಿರುವ ವಿಷಯವೆಂದರೆ ರಜಸ್ರಾವ ಯಾವಾಗಲೂ ಕೇವಲ ನಾಲ್ಕೇ ನಾಲ್ಕು ದಿನ ಇರುವದಿಲ್ಲ ಅನ್ನುವದು. ಸಾಕಷ್ಟು ಸಲ ತಿಂಗಳ ರಜಸ್ರಾವ ಐದು ಆರು ದಿನಗಳ ಕಾಲ ಇರುತ್ತದೆ. ಕೆಲವೊಮ್ಮೆ ಗರ್ಭಾಶಯದ ಅಥವಾ ಅಂಡಾಶಯದ ಕಾಯಿಲೆಯಿರುವಾಗ ರಜಸ್ರಾವ ಹತ್ತು ಹದಿನೈದು ದಿನ, ಅಷ್ಟೇ ಏಕೆ, ತಿಂಗಳಾನುಗಟ್ಟಲೆ ಮುಂದುವರಿಯುತ್ತದೆ. ರಜಸ್ರಾವವೇ ಅಶುದ್ಧ ಎಂದಾದ ಬಳಿಕ ಅದು ಎಷ್ಟು ದಿನ ಇರುತ್ತದೆಯೋ ಅಷ್ಟು ದಿನ ಹೆಂಗಸು ಅಶುದ್ಧಳೇ ಅಲ್ಲವೇ ? ಇದಕ್ಕೆ ಉತ್ತರ ಹೌದು ಮತ್ತು ಅಲ್ಲ! ರಜಸ್ರಾವ ಶುರುವಾದಾಗ ಅದು ಅಶುದ್ಧ ಮತ್ತು ಆದಕ್ಕಾಗಿ ಹೆಂಗಸು 'ಹೊರಗೆ' ಕೂಡಬೇಕು. ಆದರೆ ಸರಿಯಾಗಿ ನಾಲ್ಕು ದಿನಗಳ ನಂತರ ನೀರೆರೆದುಕೊಂಡ ಬಳಿಕ ಅವಳು ಶುದ್ಧಳಾಗಿಬಿಡುತ್ತಾಳೆ. 'ಒಳಗೆ' ಬಂದುಬಿಡುತ್ತಾಳೆ. ನಾಲ್ಕನೆಯ ದಿನದ ನಂತರವೂ ಅವಳ ರಜಸ್ರಾವ ಮುಂದುವರಿದಿದ್ದರೆ ಅದಕ್ಕೇನು ? ಅದು ಯಾರಿಗೆ ತಾನೇ ಗೊತ್ತಾಗುತ್ತದೆ ?

'ಹೊರಗೆ' ಕೂಡುವ ಪದ್ಧತಿಯ ಪರವಾಗಿ ಬಹಳ ಹೆಚ್ಚು ಚಾಲ್ತಿಯಲ್ಲಿರುವ ಸಮರ್ಥನೆಯೆಂದರೆ 'ವಿಶ್ರಾಂತಿಯ ಅಗತ್ಯ'. ಮುಟ್ಟಾದ ಹೆಂಗಸಿಗೆ ಅಶಕ್ತತನ ಅನಿಸುತ್ತದೆ, ಅವಳಿಂದ ದಿನನಿತ್ಯದ ನೂರೆಂಟು ಕೆಲಸ ಮಾಡಿಸುವದು ಸರಿಯಲ್ಲ, ಅವಳಿಗೆ ವಿಶ್ರಾಂತಿಯ ಅವಶ್ಯಕತೆ ಇರುತ್ತದೆ. ಆದುದರಿಂದ ಅವಳು ಹೊರಗೆ ಅರ್ಥಾತ್ ಮನೆಗೆಲಸದಿಂದ ಹೊರಗೆ ಕೂಡಬೇಕು. ಎಷ್ಟು ತರ್ಕಬದ್ಧವೂ ಹೆಂಗಸರಿಗೆ ಹಿತಕಾರಿಯೂ ಆದದ್ದಾಗಿದೆ ಅಲ್ಲವೇ ಈ ವಿಚಾರ ? ಆದರೆ ಸತ್ಯಾಂಶವೇನು ? ವೈಜ್ಞಾನಿಕ ಮಾಹಿತಿಯ ಪ್ರಕಾರ ಒಬ್ಬ ಆರೋಗ್ಯವಂತ ಹೆಂಗಸಿಗೆ ಮುಟ್ಟಾದಾಗ ಸಂಪೂರ್ಣ ವಿಶ್ರಾಂತಿಯ ಅಗತ್ಯವೇನೂ ಇರುವದಿಲ್ಲ,

ಆ ಅವಧಿಯಲ್ಲಿ ಅವಳು ತನ್ನ ದೈನಂದಿನ ಚಟುವಟಿಕೆಗಳನ್ನು ಕಡಿಮೆ ಮಾಡಿಕೊಳ್ಳುವ ಅಗತ್ಯವಿರುವದಿಲ್ಲ. ಹೌದು, ರಕ್ತಸ್ರಾವದ ಪ್ರಮಾಣ ಹೆಚ್ಚಿಗಿದ್ದರೆ ಅಥವಾ ಅತೀವ ಹೊಟ್ಟೆನೋವು, ಸೊಂಟನೋವು ಇದ್ದರೆ ಅವಳಿಗೆ ಸ್ವಲ್ಪ ಮುಟ್ಟಿಗಿನ ವಿಶ್ರಾಂತಿಯು ಅಗತ್ಯವಿರುತ್ತದೆ. ಆದರೆ ವಾಸ್ತವದಲ್ಲಿ ಆಗುವದೇನು? ರಕ್ತಸ್ರಾವ ಹೆಚ್ಚಾಗಿದ್ದರೂ ಆ ಹೆಂಗಸು ನಾಲ್ಕು ದಿನಗಳಾದ ನಂತರ ಒಳಗೆ ಬರಲೇಬೇಕು; ಮತ್ತೆ ಮನೆಗೆಲಸದ ನೊಗಕ್ಕೆ ಹೆಗಲು ಕೊಡಲೇ ಬೇಕು! ಈ ವೈಜ್ಞಾನಿಕ ಮಾಹಿತಿ ಇತ್ತೀಚೆಗಷ್ಟೇ ಬಂದದ್ದು, ಬಹುತೇಕ ಬ್ರಾಹ್ಮಣರಿಗೆ ಗೊತ್ತೇ ಇಲ್ಲ ಅಂದಿರಾ? ಇತರ ಜಾತಿಯ ಹೆಂಗಸರೆಲ್ಲರೂ ಮುಟ್ಟಾದಾಗಲೂ ಮನೆಗೆಲಸ, ಹೊಲದ ಕೆಲಸ ಎಲ್ಲವನ್ನೂ ಮಾಡಿಕೊಂಡು ಹೋಗುತ್ತಾರಲ್ಲ? ತಮ್ಮ ಹೊಲದಲ್ಲಿ ಕೆಲಸ ಮಾಡುವ ರೈತ ಹೆಂಗಸಿಗೆ ಅಥವಾ ತಮ್ಮ ಮನೆಯ ಆಳು ಹೆಂಗಸಿಗೆ ತಿಂಗಳಿಗೆ ನಾಲ್ಕು ದಿವಸ ವಿಶ್ರಾಂತಿಯು ಅಗತ್ಯವಿರುವದಿಲ್ಲವೇ? ಅವರ ಬಗ್ಗೆ ಬ್ರಾಹ್ಮಣರಿಗೆ ಯಾಕೆ ಯಾವತ್ತೂ ಕಳಕಳಿಯೆನಿಸಲಿಲ್ಲ? ನನ್ನ ಈ ಆಕ್ಷೇಪಣೆಯನ್ನು ಕೇಳಿದ ಪರಿಚಯದವರೊಬ್ಬರು ಅಂದರು: "ಸರಿಯೋ ತಪ್ಪೋ, ಅಗತ್ಯವೋ ಅನಗತ್ಯವೋ ಮುಟ್ಟಿನ ನೆವದಿಂದಲಾದರೂ ಹೆಂಗಸಿಗೆ ವಿಶ್ರಾಂತಿ ಸಿಗುತ್ತದೆಯಲ್ಲ, ಅದೇ ಈ ಪದ್ಧತಿಯ ದೊಡ್ಡ ಲಾಭ". ಅದಕ್ಕೆ ನಾನೆಂದೆ. "ಹೌದು, ಈ ನೆವದಿಂದ ಹೆಂಗಸಿಗೆ ಸ್ವಲ್ಪ ವಿಶ್ರಾಂತಿ ಸಿಗುತ್ತದೆಯೆಂಬುದು ಸರಿ. ಆದರೆ ಹೆಂಗಸು ಮುಟ್ಟಿನ ಅವಧಿಯಲ್ಲಿ ವಿಶ್ರಾಂತಿಯನ್ನು ಒಳಗಿದ್ದುಕೊಂಡೇ ಪಡೆಯಬಹುದಲ್ಲ. ಎಲ್ಲರಿಗೂ ಅಸ್ಪೃಶ್ಯಳಾಗಿ ಮೂಲೆಯ ಕಸಬರಿಗೆಗಿಂತಲೂ ಕೀಳಾಗಿ ವಿಶ್ರಾಂತಿ ಯಾಕೆ ಪಡೆಯಬೇಕು?" ಪಾಪ, ಅವರ ಬಳಿ ಇದಕ್ಕೆ ಉತ್ತರವಿರಲಿಲ್ಲ!

ಬ್ರಾಹ್ಮಣ ಹೆಂಗಸರಲ್ಲಿ ಈ ಹೊರಗೆ ಕೂಡುವ ಪದ್ಧತಿಯು ಹೇಗೆ ಪ್ರಾರಂಭವಾಯಿತು ಎಂಬುದಕ್ಕೆ ಒಂದು ಪ್ರಾಚೀನ ಕತೆಯಿದೆ. ಇದರಿಂದ ಈ ಪದ್ಧತಿ ಎಷ್ಟು ಹಳೆಯದಾದದ್ದು ಎಂಬುದು ಗೊತ್ತಾಗುತ್ತದೆ. ಹಿಂದೊಮ್ಮೆ ಇಂದ್ರನು ಒಬ್ಬ ಬ್ರಾಹ್ಮಣನನ್ನು ಕೊಂದನಂತೆ. ಬ್ರಾಹ್ಮಣರನ್ನು ಕೊಲ್ಲುವದೆಂದರೆ ಶೂದ್ರ, ಪಂಚಮರನ್ನು ಕೊಲ್ಲುವಂತಲ್ಲ. ಅದು ಮಹಾಘೋರ ಪಾಪ. ಶ್ರೀರಾಮಚಂದ್ರನು ಶೂದ್ರಶಂಭೂಕನನ್ನು ಕೊಲ್ಲಿಸಿದಾಗ ಅವನಿಗೆ ಯಾವ ಶಾಪವೂ ತಗಲಲಿಲ್ಲ. ಬದಲಿಗೆ ಅವನು ಮರ್ಯಾದಾ ಪುರುಷೋತ್ತಮನಾಗಿ ಮೆರೆದನು. ಆದರೆ ಇಂದ್ರು ಕೊಂದದ್ದು ಒಬ್ಬ ಬ್ರಾಹ್ಮಣನನ್ನು. ಇಂದ್ರ ಸ್ವತಃ ದೇವರು. ಆದರೇನಂತೆ, ಅವನಿಗೆ ಬ್ರಹ್ಮಹತ್ಯಾಶಾಪ ತಗಲದೇ ಇರುತ್ತದೆಯೇ? ಹೀಗೆ ಬ್ರಹ್ಮಹತ್ಯೆಯ ಶಾಪಕ್ಕೊಳಗಾದ ಇಂದ್ರನು ಬ್ರಹ್ಮನ ಬಳಿ ಬಂದು ತನಗಂಟಿದ

ಶಾಪವನ್ನು ದೂರ ಮಾಡುವಂತೆ ಕೇಳಿಕೊಂಡನು. ಬ್ರಹ್ಮನು ಸ್ವತಃ ಸೃಷ್ಟಿಕರ್ತ; ಅವನಿಗೆ ಅಸಾಧ್ಯವಾದುದು ಯಾವುದು ? ಅವನು ಒಂದು ಉಪಾಯ ಮಾಡಿ ಅವರ ಪ್ರಕಾರ ಇಂದ್ರನಿಗಂಟಿದ ಬ್ರಹ್ಮಹತ್ಯೆಯ ಶಾಪವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಒಂದೊಂದು ಭಾಗವನ್ನು ಕ್ರಮಶಃ ಅಗ್ನಿಯ ಮೊದಲ ಜ್ವಾಲೆಗೆ, ನದಿಯ ಮೊದಲ ಪ್ರವಾಹಕ್ಕೆ, ಪರ್ವತ ಶಿಖರ, ವೃಕ್ಷಗಳಿಗೆ ಹಾಗೂ ಸ್ತ್ರೀಯರ ರಜಸ್ಸಿಗೆ ಕೊಡಮಾಡಿದನು. ಈ ಶಾಪದಿಂದಾಗಿ ಮುಟ್ಟಾದ ಹೆಂಗಸು ಮೊದಲನೆ ದಿವಸ ಚಾಂಡಾಲರಂತೆಯೂ ಎರಡನೆ ದಿವಸ ಬ್ರಹ್ಮಘಾತಿನಿಯಂತಲೂ, ಮೂರನೆ ದಿವಸ ಅಗಸರಂತೆಯೂ ಅಪವಿತ್ರಳಾದಳು. ಹೀಗಾಗಿ ಹೆಂಗಸು ಮುಟ್ಟಾದ ಮೂರು ದಿನಗಳ ಕಾಲ ಅಪವಿತ್ರಳಾಗಿ 'ಹೊರಗೆ' ಕೂಡಬೇಕಾಯಿತು. ಹಾಗೂ ನಾಲ್ಕನೆಯ ದಿವಸ ಗಂಡನ 'ಸೇವೆ' ಮಾಡುವಷ್ಟರ ಮಟ್ಟಿಗೆ ಒಳಗೆ ಬರುವವಳಾದಳು. ಆ ಬ್ರಹ್ಮ ಪಿತಾಮಹನಾದರೂ ಗಂಡಸರನ್ನು ಬಿಟ್ಟು ಹೆಂಗಸರನ್ನಷ್ಟೇ ಏಕೆ ಹಿಡಿದನೊ ತಿಳಿಯದು. ಗಮನಿಸಬೇಕಾದ ಒಂದು ಅಂಶವೆಂದರೆ ಬ್ರಹ್ಮ ಶಾಪ ಕೊಟ್ಟದ್ದು ಕೇವಲ ಬ್ರಾಹ್ಮಣ ಹೆಂಗಸರಿಗಲ್ಲ, ಎಲ್ಲ ಜಾತಿಯ ಹೆಂಗಸರಿಗೆ. ಆದರೆ ಇತರ ಜಾತಿಯ ಹೆಂಗಸರು ಹೊರಗೆ ಕೂಡುವದಿಲ್ಲ. ಹೀಗೆ ಬ್ರಹ್ಮನ ಶಾಪವನ್ನು ಮೀರಿ ಹೊರಗೆ ಆಗುವದನ್ನು ಪಾಲಿಸದೆ ಜೀವನವನ್ನು ಕಳೆಯುವ ಅನೇಕ ಜಾತಿಗಳ ಅಸಂಖ್ಯಾತ ಹೆಂಗಸರು ನರಕದಲ್ಲಿ ಕೊಳೆಯುತ್ತಾರೆಯೋ ಏನೋ!

ಮುಟ್ಟಿನ ಪುರಾಣ ಇಲ್ಲಿಗೇ ಮುಗಿಯುವದಿಲ್ಲ; ಮೇಧಾವಿ ಬ್ರಾಹ್ಮಣರಿಗೆ ಗುರುತರವಾದ ಇನ್ನೊಂದು ಸಮಸ್ಯೆ ಎದುರಾಯಿತು. ಮುಟ್ಟಾದಾಗ ಹೆಂಗಸು ಅಶುದ್ಧಳು, ಅಪವಿತ್ರಳು. ಅದಕ್ಕಾಗಿ ಅವಳು ಹೊರಗೆ ಕೂಡಬೇಕು, ಕೂಡುತ್ತಾಳೆ. ಆದರೆ ಈ ನಾಲ್ಕು ದಿನಗಳ ಅವಧಿಯಲ್ಲಿ ಅವಳು ತಿಳಿದೋ ತಿಳಿಯದೆಯೋ ಸ್ವಾಮಿಗಳ, ಆಚಾರ್ಯರ ಕಣ್ಣಿಗೆ ಬಿದ್ದು ಬಿಟ್ಟರೆ ? ಮುಟ್ಟಬಾರದ್ದೇನಾದರೂ ಮುಟ್ಟಿದರೆ ? ತಿಂಗಳಿಗೊಂದು ಸಲ ವರ್ಷಕ್ಕೆ ಹನ್ನೆರಡು ಸಲ ಹೀಗೆ ಸುಮಾರು ಮೂವತ್ತು ವರ್ಷಗಳ -(ನಡುವೆ ಬಸಿರು-ಬಾಣಂತನಗಳನ್ನು ವಜಾ ಮಾಡಿ)- ದೀರ್ಘ ಅವಧಿಯಲ್ಲಿ ಮುಟ್ಟಾದ ಅಶುದ್ಧ ಹೆಂಗಸು ತಿಳಿದೊ ತಿಳಿಯದೆಯೋ ಏನೇನು ಪಾಪಗಳನ್ನು ಮಾಡಿರುತ್ತಾಳೆಯೋ ರಾಮ ರಾಮಾ! ಇಂತಹ ಪಾಪಗಳನ್ನು ಮಾಡಿದ ಹೆಂಗಸು ಮುಂದಿನ ಜನ್ಮದಲ್ಲಿ ನಾಯಿಯಾಗಿಯೋ ದನವಾಗಿಯೋ ಹುಟ್ಟುತ್ತಾಳೆ. ಇತ್ತ ಮುಟ್ಟಾಗಿ ಅಶುದ್ಧಳಾಗುವದನ್ನು ತಪ್ಪಿಸುವಂತಿಲ್ಲ- ಅದು ಬ್ರಹ್ಮ ಕೊಟ್ಟಿರುವ ಶಾಪ; ಅತ್ತ ಘಟಿಸುತ್ತಿರುವ ಪಾಪ ಕೃತ್ಯಗಳನ್ನು ನೋಡುತ್ತ ಸುಮ್ಮನೆ ಕೂಡುವದೂ ಸರಿಯಲ್ಲ. ಹಾಗಾದರೆ ಈ

ಸಮಸ್ಯೆಗೆ ಪರಿಹಾರವೇನು ? 'ಋಷಿ ಪಂಚಮಿ ವ್ರತ'ವೇ ಈ ಸಮಸ್ಯೆಗೆ ಅದ್ಭುತವಾದ ಪರಿಹಾರೋಪಾಯ. ಋಷಿ ಪಂಚಮಿ ವ್ರತ ಎಂಬುದು ಎಷ್ಟು ಶ್ರೇಷ್ಠವಾದದ್ದು. ಅದರ ಮಹಿಮೆಯೇನು ಎಂಬುದನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ. ಆಸಕ್ತಿಯುಳ್ಳವರೆಲ್ಲರೂ ಋಷಿ ಪಂಚಮಿ ವ್ರತದ ಕತೆಯನ್ನು ಸ್ವತಃ ಓದಿ ಆನಂದಿಸಬೇಕು. (ಶ್ರೀ ಮದ್ಭವಿಷ್ಯೋತ್ತರ ಪುರಾಣೋಕ್ತ ಋಷಿಪಂಚಮೀ ಪೂಜಾ-ಕಥಾ. ಪ್ರಕಾಶಕರು: ವೇ॥ ಶ್ರೀನಿವಾಸಾಚಾರ್ಯ ಹೊಂಬಾಳಿ & ಸನ್. ಸ್ಟೇಶನ್ ರೋಡ, ಗದಗ. ೧೯೯೦.) ಸಂಕ್ಷಿಪ್ತವಾಗಿ ಹೇಳಬಹುದಾದುದು ಇಷ್ಟು : ಮುಟ್ಟಾದಾಗ ಒಬ್ಬ ಹೆಂಗಸು ತಿಳಿದೋ ತಿಳಿಯದೆಯೋ ಅನೇಕ ಪಾಪಕೃತ್ಯಗಳನ್ನು ಮಾಡಿರುತ್ತಾಳೆ ಅಲ್ಲವೇ ? ಮೂವತ್ತು ವರ್ಷಗಳ ದೀರ್ಘ ಅವಧಿಯಲ್ಲಿ ಈ ಪಾಪ ಸಹಜವಾಗಿಯೇ ಬೆಟ್ಟಪ್ಪಾಗಿರುತ್ತದೆ. ಈ ಬೆಟ್ಟಗಾತ್ರದ ಪಾಪವನ್ನು ಸಂಪೂರ್ಣ ತೊಳೆದುಕೊಳ್ಳುವದಕ್ಕಾಗಿ ರಜೋನಿವೃತ್ತಿಯಾದ ಬಳಿಕ ಅಂದರೆ ಮುಟ್ಟು ಹೋದ ಬಳಿಕ ಹೆಂಗಸು ಈ ವ್ರತವನ್ನು ಆಚರಿಸಬೇಕು. ಇದು ಏಳು ವರ್ಷಗಳ ವ್ರತವು. ಪ್ರಾರಂಭದಲ್ಲಿ ಅಂದರೆ ಋಷಿಪಂಚಮಿ ವ್ರತ ಹಿಡಿಯುವಾಗ ಆ ಹೆಂಗಸು ಒಂದು ಪೂಜೆ ಮಾಡಿಸಬೇಕು. ಪೂಜೆಯು ಒಂದು ಅಂಗವಾಗಿ ಬಳಗದವರೊಂದಿಗೆ ಮತ್ತು ಅನೇಕ ಹೆಂಗಸರೊಂದಿಗೆ ಭಕ್ತಿಭಾವನೆಯಿಂದ ಋಷಿಪಂಚಮಿ ಕತೆಯನ್ನು ಆಲಿಸಬೇಕು. ಈ ಕತೆಯಲ್ಲಿ ಮುಟ್ಟಿನ ಪಾಪಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳದೆ ಇದ್ದರೆ ಆ ಹೆಂಗಸು ಏನೇನು ಕಷ್ಟ ಅನುಭವಿಸಬೇಕಾಗುತ್ತದೆ ಎಂಬುದನ್ನೂ ಋಷಿಪಂಚಮಿ ವ್ರತ ಮಾಡಿದ ಬಳಿಕ ಹೇಗೆ ಪುಣ್ಯ ಲಭಿಸುತ್ತದೆ ಎಂಬುದನ್ನೂ ಅತ್ಯಂತ ಮನೋಹರವಾಗಿ ಹೇಳಲಾಗಿದೆ. ಪೂಜೆ, ಕತೆ ಮುಗಿದ ನಂತರ ಅನೇಕ ಬ್ರಾಹ್ಮಣ ಶ್ರೇಷ್ಠರಿಗೆ ಮೃಷ್ಟಾನ್ನ ಭೋಜನ ಹಾಕಿ ದಾನ ನೀಡಬೇಕು. ಇಷ್ಟು ಮಾಡಿದ್ದಾದರೆ ಮುಟ್ಟಿನ ಪಾಪದ ಬೆಟ್ಟವು ನೀರು ತಗುಲಿದ ಉಪ್ಪಿನಂತೆ ಕರಗಿಹೋಗಿಡುತ್ತದೆ.

ಇತ್ತೀಚಿನ ವರ್ಷಗಳಲ್ಲಿ ಈ ಮುಟ್ಟಿನ ಪುರಾಣಕ್ಕೆ ಎರಡು ಹೊಸ ಅಧ್ಯಾಯಗಳನ್ನು ಸೇರಿಸಲಾಗಿದೆ. ಅಂದರ್ ಬಾಹರ್ ಜಾದೂ ಹಾಗೂ ಅಂತಿಮ ಗೆಲವು ಇವೇ ಆ ಹೊಸ ಅಧ್ಯಾಯಗಳು; ಈ ಹೊಸ ಅಧ್ಯಾಯಗಳ ಸೃಷ್ಟಿಯ ಶ್ರೇಯಸ್ಸು ನಗರ ಪ್ರದೇಶದ ಬ್ರಾಹ್ಮಣರಿಗೆ ಸಲ್ಲತಕ್ಕದ್ದು ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಕಾಲ ಬದಲಾಗಿದೆ. ಈಗ ಎಷ್ಟೋ ಬ್ರಾಹ್ಮಣ ಹೆಂಗಸರು ಪ್ರೌಢಶಾಲಾ ಶಿಕ್ಷಣ, ಕಾಲೇಜು ಶಿಕ್ಷಣ ಪಡೆಯುತ್ತಾರೆ; ಬ್ಯಾಂಕು ಕಚೇರಿಗಳಲ್ಲಿ ನೌಕರಿ ಮಾಡುತ್ತಾರೆ. ಆದರೆ ಇವರೆಲ್ಲರೂ ವಯಸ್ಸಿಗನುಗುಣವಾಗಿ ತಿಂಗಳಿಗೊಮ್ಮೆ ಮುಟ್ಟಾಗುತ್ತಾರೆ. ಇದರಲ್ಲೇನು ವಿಶೇಷವೆಂದಿರಾ ? ವಿಶೇಷ ಎಂಬುದು ಹೀಗೆ: ಹೆಂಗಸು ಪ್ರತಿ

ತಿಂಗಳೂ ನಾಲ್ಕು ದಿವಸ ಅಸ್ಪೃಶ್ಯಳಾಗಬೇಕು. ಆದರೆ ಪ್ರತಿ ತಿಂಗಳೂ ನಾಲ್ಕು ದಿವಸ ರಜೆ ಹಾಕಿ ಮನೆಯಲ್ಲಿ ಕೂಡುವದು ಅವಶ್ಯವಿಲ್ಲ. ಇಂಥ ಹೆಂಗಸರಿಗೆ ಇದು ಅಡ ಕೊತ್ತಿನಲ್ಲಿ ಸಿಕ್ಕ ಅಡಕೆಯನ್ನಾಗಿಸುತ್ತದೆ. ಇತ್ತ ಸಂಪ್ರದಾಯ – ಬಿಡುವಂತಿಲ್ಲ; ಅತ್ತ ವಾಸ್ತವ – ಅದನ್ನೂ ಬಿಡುವಂತಿಲ್ಲ. ಇದಕ್ಕೇನು ಪರಿಹಾರ ? ಬಹಳ ಆಶ್ಚರ್ಯದ ಸಂಗತಿಯೆಂದರೆ ಅನೇಕ ಬ್ರಾಹ್ಮಣರು ಇದಕ್ಕೆ ಅತ್ಯಂತ ಸರಳವಾದ ಉಪಾಯವೊಂದನ್ನು ಶೋಧಿಸಿಕೊಂಡುಬಿಟ್ಟಿದ್ದಾರೆ– ಅವರು ಹೆಂಗಸರನ್ನು ಎರಡು ಹೋಳುಗಳಾಗಿ ಸೀಳಿಬಿಡುತ್ತಾರೆ-ಅಡಕೊತ್ತು ಅಡಿಕೆಯನ್ನು ಸೀಳು ವಂತೆ ! ಅರ್ಥಾತ್ ಮುಟ್ಟಿನ ಮೂರು ದಿನಗಳ ಅವಧಿಯಲ್ಲಿ ಈ ಹೆಂಗಸು ಮನೆಯೊಳಗಿರುವಾಗ ಅಸ್ಪೃಶ್ಯಳು. ಮನೆಯ ಹೊರಗೆ ಕಾಲಿಟ್ಟ ತಕ್ಷಣ ಇತರ ಎಲ್ಲರಂತೆಯೇ ಸ್ಪೃಶ್ಯಳು. ಒಂದು ಉದಾಹರಣೆ ಕೊಟ್ಟರೆ ಇದು ಹೆಚ್ಚು ಸುಲಭವಾಗಿ ಅರ್ಥವಾದೀತು. ರಾಧಾ ಬ್ಯಾಂಕಿನಲ್ಲಿ ಕೆಲಸ ಮಾಡುತ್ತಾಳೆ. ಅವಳು ಇಂದು ಬೆಳಿಗ್ಗೆ ಮುಟ್ಟಾಗಿದ್ದಾಳೆ. ಇನ್ನು ನಾಲ್ಕನೆಯ ದಿವಸ ಎರೆದುಕೊಂಡು ಒಳಗೆ ಬರುವವರೆಗೂ ಅವಳು ಮನೆಯೊಳಗಿರುವಾಗ ಅಸ್ಪೃಶ್ಯಳು– ಯಾವ ವಸ್ತುವನ್ನೂ ಮುಟ್ಟಲಾರಳು. ಒಂಬತ್ತು ಗಂಟೆಗೆ ಹಯಗ್ರೀವಾಚಾರ್ಯರು ಮನೆಗೆ ಬಂದರೆ ಇವಳು ಎದ್ದು ಒಳಗೆ ಹೋಗಿ ಒಂದು ಕಪ್ಪು ಹಾಲು ತಂದು ಕೊ......... ಊಹೂಂ, ಇಲ್ಲ, ಶಕ್ಯವಿಲ್ಲ. ಆದರೆ ಹತ್ತು ಗಂಟೆಗೆ ರಾಧಾ ಬ್ಯಾಂಕಿಗೆ ಹೋಗುತ್ತಾಳೆ. ಹನ್ನೊಂದು ಗಂಟೆಗೆ ಬ್ಯಾಂಕಿಗೆ ಬರುವ ಇದೇ ಹಯಗ್ರೀವಾಚಾರ್ಯರಿಗೆ ಇದೇ ರಾಧಾ ತನ್ನ ಕೈಯಾರೆ ರೊಕ್ಕ ಎಣಿಸಿಕೊಡುತ್ತಾಳೆ; ಇದು ನಡೆಯುತ್ತದೆ. ಸಂಜೆ ಬ್ಯಾಂಕಿನ ಕೆಲಸ ಮುಗಿಸಿ ರಾಧಾ ತಿರುಗಿ ಬಂದು ಮನೆಯ ಒಳಗೆ ಕಾಲಿಟ್ಟಳೋ ಮತ್ತೆ ಅಸ್ಪೃಶ್ಯಳು ! ಇದು ಎಂತಹ ಅದ್ಭುತ ನೋಡಿ–ಒಳಗಿರುವಾಗ ಹೊರಗೆ ಹೊರಗಿರುವಾಗ ಒಳಗೆ,! ಇದೇ ಅಂದರ್–ಬಾಹರ್ ಜಾದೂ. ಅಥವಾ ಹೋಳಾಗುವ ಅಡಿಕೆಯ ಜಾದೂ. ಮೂರು ದಿನಗಳ ಬಳಿಕ ಜಾದೂ ಮುಗಿಯುತ್ತದೆ. ಹೋಳಾದ ಅಡಿಕೆ ಕೂಡಿಕೊಂಡು ಮತ್ತೆ ಒಂದಾಗುತ್ತದೆ— ಮುಂದಿನ ತಿಂಗಳು ಆ ದರಿದ್ರ ಮುಟ್ಟು ಮತ್ತೆ ಬರುವವರೆಗೂ.

ಮೊದಲಿನ ದಿನಗಳಲ್ಲಿ ಅವಿಭಕ್ತ ಕುಟುಂಬಗಳಿರುತ್ತಿದ್ದವು. ಮನೆಯಲ್ಲಿ ಒಬ್ಬ ಹೆಂಗಸು ಹೊರಗಾದರೆ ಇನ್ನೊಬ್ಬ ಹೆಂಗಸು ಎಲ್ಲ ಕೆಲಸಗಳನ್ನೂ ಮಾಡಿಕೊಂಡು ಹೋಗುತ್ತಿದ್ದಳು. ಆದರೆ ಈಗೀಗ ಅದರಲ್ಲೂ ನಗರ ಪ್ರದೇಶಗಳಲ್ಲಿ ಈ ಪರಿಸ್ಥಿತಿ ಉಳಿದಿಲ್ಲ. ಒಬ್ಬಳೇ ಹೆಂಗಸು ಎಲ್ಲವನ್ನೂ ನಿಭಾಯಿಸಿಕೊಂಡು ಹೋಗಬೇಕಾ ಗುತ್ತದೆ. ಈ ಹಬ್ಬ ಆ ಹಬ್ಬ, ಸತ್ಯನಾರಾಯಣ ಪೂಜೆ, ಶ್ರಾದ್ಧ, ಮದುವೆ, ಮುಂಜಿವೆ, ತೀರ್ಥಕ್ಷೇತ್ರದರ್ಶನ ಹೀಗೆ ವರ್ಷವಿಡೀ ಏನಾದರೊಂದು ಇದ್ದೇ ಇರು ತ್ತದೆ. ಆದರೆ ಮುಟ್ಟಿಗೆ ಇದಾವುದೂ ತಿಳಿಯುವದೇ ಇಲ್ಲ. ತನ್ನ ಪಾಡಿಗೆ ತಾನು ತಿಂಗಳಿಗೊಮ್ಮೆ ಬರುತ್ತಲೇ ಇರುತ್ತದೆ. ಕೆಲವು ಸಲವಂತೂ ಮನೆಯಲ್ಲಿ ಇಂತಹ ಪವಿತ್ರ ಕೆಲಸ ಇರುವಾಗಲೇ ಬರುವದಾಗಿ ಹೆದರಿಸುತ್ತದೆ. ಮುಂದಿನ ಗುರುವಾರ

ಮನೆಯಲ್ಲಿ ಸತ್ಯನಾರಾಯಣ ಪೂಜೆ. ಆದರೆ ಸುಭದ್ರಾಳಿಗೆ ಆಗ ಮುಟ್ಟಿನ ದಿನಗಳು. ಮುಟ್ಟಾಗಿ ಬಿಟ್ಟರೆ ಸತ್ಯನಾರಾಯಣ ಪೂಜೆ, ಮಡಿ ಅಡಿಗೆ, ಆಚಾರ್ಯರ ಊಟ ಎಲ್ಲ ಯಾರು ಮಾಡುವದು ? ಮುಟ್ಟಾಗಿರುವದನ್ನು ಯಾರಿಗೂ ಹೇಳದೆ ಸುಭದ್ರಾ ಎಲ್ಲವನ್ನೂ ನಿಭಾಯಿಸಿಕೊಂಡು ಹೋಗಬಹುದು. ಇವಳು ಮುಟ್ಟಾಗಿರುವುದು ಆಚಾರ್ಯರಿಗೂ ತಿಳಿಯಲಿಕ್ಕಿಲ್ಲ. ಆದರೆ ಆ ಸರ್ವಾಂತರ್ಯಾಮಿ ಶ್ರೀ ಸತ್ಯ ನಾರಾಯಣ! ಅವನಿಗ ತಿಳಿಯದೆ ಇರುತ್ತದೆಯೆ ? ಮುಟ್ಟಾಗಿ ಅಪವಿತ್ರಳಾಗಿರುವಾಗ ಸತ್ಯನಾರಾಯಣ ಪೂಜೆ ಮಾಡುವದೆಂದರೇನು , ಮಡಿ ಅಡಿಗೆ ಮಾಡಿ ಆಚಾರ್ಯ ರಿಗೆ ಊಟಕ್ಕೆ ಹಾಕುವದೆಂದರೇನು ? ಸಹಜವಾಗಿಯೇ ಸುಭದ್ರಾ ಇಂತಹ ಪಾಪ ಕೃತ್ಯ ಮಾಡಲು ಹಿಂಜರಿಯುತ್ತಾಳೆ. ಈ ಧರ್ಮಸಂಕಟಕ್ಕೆ ಬ್ರಾಹ್ಮಣರು ಆಧು ನಿಕ ವೈದ್ಯ ವಿಜ್ಞಾನದಲ್ಲಿ ಗುಳಿಗೆಗಳ ರೂಪದಲ್ಲಿ ಪರಿಹಾರ ಕಂಡುಕೊಂಡಿದ್ದಾರೆ ಇಂದು ಅನೇಕ ಹೆಂಗಸರು ಡಾಕ್ಟರರ ಬಳಿ ಬಂದು ಮುಟ್ಟು ಹಿಂದೆ ಅಥವಾ ಮುಂದೆ ಆಗುವಂತೆ ಗುಳಿಗೆ ಪಡೆಯುತ್ತಾರೆ. ಇದರ ಹತ್ತು ಪಟ್ಟು ಹೆಚ್ಚು ಜನ ಹೆಂಗಸರು ತಾವೇ ನೇರವಾಗಿ ಔಷಧ ಅಂಗಡಿಯಿಂದ ಗುಳಿಗೆ ಕೊಂಡು ತಂದು ಸೇವಿಸುತ್ತಾರೆ. ವೈದ್ಯಕೀಯ ಶಾಸ್ತ್ರದಲ್ಲಿ ಈ ಗುಳಿಗೆಗಳನ್ನು ಯಾವ ಯಾವ ಕಾರಣಗಳಿಗಾಗಿ ಉಪಯೋಗಿಸಬೇಕೆಂಬುದನ್ನು ಸ್ಪಷ್ಟವಾಗಿಯೇ ಹೇಳಲಾಗಿದೆ. ಬೇಕಾಬಿಟ್ಟಿ ಉಪಯೋಗಿಸಬಹುದಾದ ಗುಳಿಗೆಗಳಲ್ಲ ಇವು. ಈ ಗುಳಿಗೆಗಳಿಗೆ ಗುರುತರವಾದ ದುಷ್ಪರಿಣಾಮಗಳಿವೆ. ವೈದ್ಯರ ಸಲಹೆಯಿಲ್ಲದೆ, ಪೂರ್ವ ತಪಾಸ ಣೆಯಿಲ್ಲದೆ ಈ ಗುಳಿಗೆಗಳನ್ನು ಸೇವಿಸಬಾರದು. ಮೇಲಿಂದ ಮೇಲೆ ಈ ಗುಳಿಗೆ ಗಳನ್ನು ಸೇವಿಸಿ ಮುಟ್ಟಿನ ನೈಸರ್ಗಿಕ ಚಕ್ರವನ್ನು ತಪ್ಪಿಸುತ್ತ ಹೋದರೆ ಅತಿ ರಕ್ತ ದೊತ್ತಡ, ಮಧುಮೇಹ ಮುಂತಾದ ಕಾಯಿಲೆಗಳು ಉಂಟಾಗಬಹುದು. ಅಥವಾ ಮುಟ್ಟಿನ ರಕ್ತಸ್ರಾವ ಅತಿಯಾಗಿ ಗರ್ಭಕೋಶವನ್ನೇ ತೆಗೆದುಹಾಕುವ ಅಪರೇಷನ್ (ಹಿಸ್ಟರೆಕ್ಟಮಿ) ಮಾಡಬೇಕಾಗಿ ಬರಬಹುದು.

ಆದರೆ ಇದೆಲ್ಲ ಬೇರೆಯವರಿಗೆ, ಧರ್ಮಭೀರು ಬ್ರಾಹ್ಮಣರಿಗಲ್ಲ. ಅವರ ದೃಷ್ಟಿಯಲ್ಲಿ ಈ ದುಷ್ಪರಿಣಾಮಗಳೆಲ್ಲ ಕ್ಷುಲ್ಲಕ ಅಮುಖ್ಯ ಸಂಗತಿಗಳು. ಮುಖ್ಯ ಸಂಗತಿಯೆಂದರೆ ಗುರುವಾರ ಮುಟ್ಟು ಆಗಬಾರದು, ಸತ್ಯನಾರಾಯಣ ಪೂಜೆ ಸಾಂಗವಾಗಿ ನಡೆಯ ಬೇಕು. ಇಹದಲ್ಲಿ ತೊಂದರೆಯಾದರೂ ಪರದಲ್ಲಿ ಪುಣ್ಯ ದಕ್ಕಬೇಕು ! ಹೀಗೆ ಅನೇಕ ಬ್ರಾಹ್ಮಣರು ಈ ಗುಳಿಗೆಗಳ ಮೂಲಕ ಬ್ರಹ್ಮನ ಶಾಪವನ್ನು ಕಿತ್ತಿ ಹಾಕಿ ಮುಟ್ಟಿನ ಮೇಲೆ ನಿಯಂತ್ರಣ ಸಾಧಿಸಿ ಅಂತಿಮ ಗೆಲುವನ್ನು ಪಡೆದಿದ್ದಾರೆ.

ಹೇಗಿದೆ ಒಂದು ಹಳೆಯ ಅವೈಜ್ಞಾನಿಕ ಮೌಲ್ಯವೊಂದನ್ನು ಜೀವಂತವಾಗಿಟ್ಟು ಕೊಳ್ಳಲು ಕೆಲವು ಬುದ್ಧಿವಂತರು ಕಂಡುಹಿಡಿದಿರುವ ಈ ಹೊಸ ವೈಜ್ಞಾನಿಕ ತಂತ್ರ!

ಹೊರಗಾಗುವದು, ಋಷಿಪಂಚಮಿ ಇವು ಹಿಂದೆ ಇದ್ದ ಪದ್ಧತಿಗಳು, ಈಗ ಮಾಯವಾಗಿಬಿಟ್ಟಿವೆ. ಆದ್ದರಿಂದ ಇವತ್ತಿನ ಸಂದರ್ಭದಲ್ಲಿ ಅವುಗಳ ಕುರಿತು ಹೀಗೆಲ್ಲ ಬರೆಯುವದು ಸರಿಯಲ್ಲ ಎಂದು ಕೆಲವರು ಅನ್ನಬಹುದು. ಹೀಗೆ ಅನ್ನುವವರು ಸ್ವಲ್ಪ ಬ್ರಾಹ್ಮಣರ ಮನೆಗಳನ್ನು ಸುತ್ತಾಡಿಕೊಂಡು ಬಂದರೆ ಅವರಿಗೆ ವಾಸ್ತವ ಪರಿಸ್ಥಿತಿ ಏನಿದೆ ಎಂಬುದು ತಿಳಿಯುತ್ತದೆ. ಆಧುನಿಕ ವೈಜ್ಞಾನಿಕ ಶಿಕ್ಷಣದ ಕೇಂದ್ರ ಸ್ಥಳವೆನಿಸಿರುವ ಧಾರವಾಡದಲ್ಲಿಯೇ ಅದೆಷ್ಟೋ ಬ್ರಾಹ್ಮಣರ ಮನೆಗಳಲ್ಲಿ ಇಂದಿಗೂ ಈ ಪದ್ಧತಿಗಳು ಲವಲವಿಕೆಯಿಂದ ಜೀವಂತವಾಗಿವೆ. ಹೊರಗೆ ಕೂಡುವ ಪದ್ಧತಿಯನ್ನು ಬಿಟ್ಟಿರುವ ಮನೆಗಳಲ್ಲಿಯೂ ಇದೊಂದು ಪ್ರಜ್ಞಾಪೂರ್ವಕವಾಗಿ ಮಾಡಿಕೊಂಡಿರುವ ಬದಲಾವಣೆ ಎಂದು ಹೇಳಲಿಕ್ಕಾಗದು. ಹೊರಗಾಗುವದನ್ನು ಬಿಟ್ಟಿರುವ ಹೆಂಗಸರಿಗೆ ತಾವು ತಪ್ಪು ಮಾಡುತ್ತಿದ್ದೇವೆ ಅನಿಸುತ್ತದೆ. ಋಷಿ ಪಂಚಮಿ ತೆಗೆದುಕೊಳ್ಳುವ ವೃದ್ಧ ಹೆಂಗಸರು ಪರಮ ಪೂಜ್ಯರೂ ಅನುಸರಿಸತಕ್ಕ ಆದರ್ಶ ಜೀವಗಳೂ ಆಗುತ್ತಾರೆ. ಮುಟ್ಟಾದಾಗ ಹೊರಗಾಗುವದನ್ನು ಪಾಲಿಸದೆ ತಾವು ಧರ್ಮಕ್ಕೆ ಅಪಚಾರ ಎಸಗುತ್ತಿದ್ದೇವೆ ಅನ್ನುವ ಪಾಪಪ್ರಜ್ಞೆ ಈ ಹೆಂಗಸರನ್ನು ಕಾಡುತ್ತದೆ.

ಮುಟ್ಟಾದಾಗ ಹೊರಗೆ ಕೂಡುವ ಪದ್ಧತಿ ಕೇವಲ ಬ್ರಾಹ್ಮಣರಲ್ಲಿ ಅಷ್ಟೇ ಅಲ್ಲ; ನನಗೆ ತಿಳಿದಿರುವಂತೆ ಜೈನರು ಮತ್ತು ಮರಾಠರಲ್ಲಿಯೂ ಇದೆ. ಆದರೆ ಅವರಲ್ಲಿ ಎಷ್ಟು ಆಳವಾಗಿದೆ ಅಥವಾ ಎಷ್ಟು ವಿಸ್ತಾರವಾಗಿದೆ ಎಂಬುದು ನನಗೆ ಗೊತ್ತಿಲ್ಲ; ಮುಟ್ಟಿನ ಕುರಿತಾಗಿ ಇತರ ಜಾತಿಗಳ ಮತಗಳ ಜನರಲ್ಲಿಯೂ ವಿಧವಿಧವಾದ ಪರಿಪಾಠಗಳು ಬೆಳೆದುಬಂದಿವೆ. ಉದಾಹರಣೆಗೆ 'ಮುಟ್ಟುದೋಷ' ಅನ್ನುವ ಕಲ್ಪನೆ. ಬೆಳಗಾವಿ ಜಿಲ್ಲೆಯ ಉಗಾರ್ ತಾಲೂಕಿನಲ್ಲಿ ಒಬ್ಬ ಸುಶಿಕ್ಷಿತ, ಶ್ರೀಮಂತ ಹಾಗೂ ಪ್ರಗತಿಪರರೆಂದು ಹೆಸರಾದ ಬೇಸಾಯಗಾರರಿದ್ದಾರೆ. ಅವರು ತಮ್ಮ ವೀಳೆದೆಲೆ ತೋಟದಲ್ಲಿ ಹೆಣ್ಣಾಳುಗಳನ್ನು ಕೆಲಸಕ್ಕೆ ಹಚ್ಚುವದೇ ಇಲ್ಲ. ಮುಟ್ಟಾಗಿರುವ ಹೆಂಗಸು ವೀಳ್ಯದೆಲೆ ತೋಟದೊಳಗೆ ಹೋಗಿದ್ದೇ ಆದರೆ ಮುಟ್ಟುದೋಷ ಉಂಟಾಗಿ ಇಡೀ ಎಲೆತೋಟ ಕಮರಿ ಹೋಗುತ್ತದೆಯಂತೆ ! ಯಾವ ಹೆಣ್ಣಾಳು ಯಾವತ್ತು ಮುಟ್ಟಾಗಿದ್ದಾಳೆ ಎಂಬುದನ್ನು ಹೇಳಲು ಸಾಧ್ಯವೇ ? ಇಲ್ಲ. ಅಂದಬಳಿಕ ಹೆಣ್ಣಾಳುಗಳಿಗೆ ತೋಟದೊಳಗೆ ಬರಗೊಡದಿರುವದೇ ಜಾಣತನ ಅಲ್ಲವೇ ?

ಇದೊಂದು ಅಪರೂಪದ ಉದಾಹರಣೆ ಅಲ್ಲ. ಅನೇಕ ಕಡೆ ಈ ಮುಟ್ಟುದೋಷದ ಕಾರಣದಿಂದಾಗಿ ಬಾಳೆಯ ಬನದೊಳಗೆ, ಗುಲಾಬಿ ಹೂವಿನ ತೋಟದೊಳಗೆ ಹೆಂಗಸರನ್ನು ಬಿಡುವದಿಲ್ಲ.

ಮುಟ್ಟಿನ ವಿಷಯಕ್ಕೆ ಇಷ್ಟೊಂದು ಮಹತ್ವ ಕೊಟ್ಟು ಅದನ್ನು ಚರ್ಚಿಸುವದು ಅವಶ್ಯವಿದೆಯೇ ಎಂದು ಕೆಲವರು ಕೇಳುತ್ತಾರೆ. ಸ್ವಲ್ಪ ಹೆಚ್ಚು ಮಡಿವಂತರಾದ ಇನ್ನೂ

ಕೆಲವರಿಗೆ ಮುಟ್ಟು ಎಂಬುದು ಹೆಂಗಸರು ಅನುಭವಿಸಬೇಕಾದ ವಿಷಯವೇ ಹೊರತು ಶಿಷ್ಟರು ಚರ್ಚಿಸಬೇಕಾದ ವಿಷಯವೇ ಅಲ್ಲ. ಆದರೆ ಹಿಂದೆಂದಿಗಿಂತಲೂ ಹೆಚ್ಚಾಗಿ ಇಂದು ಈ ವಿಷಯದ ಕುರಿತಾಗಿ ಚರ್ಚೆ ನಡೆಯುವದು ಅವಶ್ಯವಾಗಿದೆ. ಹೊಸ ಜ್ಞಾನದ ಬೆಳಕಿನಲ್ಲಿ ಹೊಸ, ಹೆಚ್ಚು ಸರಿಯಾದ, ಮಾನವೀಯವಾದ ಮೌಲ್ಯಗಳನ್ನು, ಪದ್ಧತಿಗಳನ್ನು ರೂಪಿಸಿಕೊಳ್ಳದೇ ಹೋದರೆ ನಾವು ಹಳೆಯ, ತಪ್ಪು ಹಾಗೂ ಹಾನಿ-ಕಾರಕ ಮೌಲ್ಯಗಳ ಕತ್ತಲೆಯಲ್ಲಿಯೇ ಮುಳುಗಿ ಕೊರಗುತ್ತೇವೆ. ಹಾಗೆ ನೋಡಿದರೆ ಮುಟ್ಟಿನ ಕುರಿತಾಗಿ ಅದರ ಎಲ್ಲ ಆಯಾಮಗಳನ್ನೂ ಗಮನದಲ್ಲಿ ಇಟ್ಟುಕೊಂಡು ಒಂದು ಗಂಭೀರವಾದ ಸಂಶೋಧನೆಯೇ ಆಗಬೇಕಾಗಿದೆ. ಉದಾಹರಣೆಗೆ ನೋಡಿರಿ: ಗರ್ಭಕೋಶದಿಂದ ಪ್ರತಿ ತಿಂಗಳೂ ಆಗುವ ರಕ್ತಸ್ರಾವಕ್ಕೆ ಸಂಸ್ಕೃತದಲ್ಲಿಯಾದರೆ ಋತುಸ್ರಾವ, ಮಾಸಿಕ ರಜಸ್ರಾವ ಮುಂತಾದ ಹೆಸರುಗಳಿವೆ. ಈ ಶಬ್ದಗಳಲ್ಲಿ ಅದು ಅಪವಿತ್ರವಾದದ್ದು, ಅಶುದ್ಧವಾದದ್ದು, ಅನ್ನುವ ಅರ್ಥ ಇಲ್ಲ. ಆದರೆ ಕನ್ನಡದಲ್ಲಿ ಈ ರಕ್ತಸ್ರಾವಕ್ಕೆ ಇರುವ ಹೆಸರುಗಳೆಂದರೆ— ಮುಟ್ಟು, ಹೊಲೆ, ಹೊರಗಾಗುವದು, ಕಡೆಗಾಗುವದು ಇತ್ಯಾದಿ. ಈ ಎಲ್ಲ ಶಬ್ದಗಳಲ್ಲಿಯೇ ಇದೊಂದು ಅಪವಿತ್ರವಾದ, ಅಶುದ್ಧವಾದ, ಹೊಲಸಾದ ಸಂಗತಿ ಅನ್ನುವ ಅರ್ಥವಿದೆ. ಯಾಕೆ ಹೀಗೆ? ಕನ್ನಡ ಭಾಷೆ ರೂಪಗೊಳ್ಳುವ ಕಾಲದಲ್ಲಾಗಲೇ ಸಮಾಜದಲ್ಲಿ ಪುರುಷಶ್ರೇಷ್ಠ ಮೌಲ್ಯಗಳು ಗಟ್ಟಿಯಾಗಿ ಮಾಸಿಕ ರಕ್ತಸ್ರಾವದ ಕುರಿತು ಈ ತರದ ಅಭಿಪ್ರಾಯಗಳು ರೂಢವಾಗಿಬಿಟ್ಟಿದ್ದವು ಎಂದೇ ಇದರ ಅರ್ಥ? ಅಥವಾ ಮೊದಲಿದ್ದ ಶಬ್ದಗಳು ಮಾಯವಾಗಿ ನಂತರ ಈಗಿರುವ ಹೆಸರುಗಳು ಬಳಕೆಯಲ್ಲಿ ಬಂದವೇ?

ಐವತ್ತು ವರ್ಷಗಳ ಹಿಂದೆ ಸುಪ್ರಸಿದ್ಧ ಕವಿ ಕೆ. ಎಸ್. ನರಸಿಂಹಸ್ವಾಮಿ ತಮ್ಮ 'ಮೈಸೂರು ಮಲ್ಲಿಗೆ'ಯಲ್ಲಿ 'ರಾಯರು ಬಂದರು ಮಾವನ ಮನೆಗೆ ರಾತ್ರಿಯಾಗಿತ್ತು... ಪದುಮಳು ಒಳಗಿಲ್ಲ'......ಎಂದು ಹಾಡಿದರು. ಹಾಡು ಬಹಳ ಜನಪ್ರಿಯವಾಯಿತು, ಕನ್ನಡಿಗರೆಲ್ಲರ ನಾಲಿಗೆಯ ಮೇಲೆ ಕುಣಿದಾಡಿತು. ಆದರೆ ಆ ಹಾಡಿನ ಪ್ರಾಯವಾದ ಹೊರಗಾಗುವ ಪದ್ಧತಿಯೇ ಮೂಲದಲ್ಲಿ ತಪ್ಪಾದದ್ದು, ಸ್ತ್ರೀ ವಿರೋಧಿಯಾದದ್ದು ಎಂದು ಯಾರಾದರೂ ಅವತ್ತು ಆಕ್ಷೇಪಣೆ ಎತ್ತಿದ್ದರೇ? ನಂತರದ ಈ ಐವತ್ತು ವರ್ಷಗಳಲ್ಲಿ? ಸರಿಯಾದ ಅಭಿಪ್ರಾಯ ತಯಾರಾಗಿ ಅದರ ಮೇಲೆ ಹಾಡುಗಳು ರಚಿತವಾಗುವದು ಯಾವಾಗ? ಪದುಮಳಿಗೆ ಈ ಅನಿಷ್ಟ ಮೌಲ್ಯಗಳಿಂದ, ಪದ್ಧತಿಗಳಿಂದ ಮುಕ್ತಿ ಯಾವಾಗ?

(ದಿ. ೨೬. ೧. ೧೯೯೨ ರಂದು ಸಂಯುಕ್ತ ಕರ್ನಾಟಕದಲ್ಲಿ 'ಮುಟ್ಟಿನ ಹಿಂದೆ ಮುಂದೆ' ಎಂಬ ಶೀರ್ಷಿಕೆಯ ನನ್ನ ಲೇಖನವೊಂದು ಪ್ರಕಟವಾಗಿತ್ತು. ಮುಟ್ಟಿನ ಪುರಾಣವು ಆ ಲೇಖನದ ವಿಸ್ತೃತ ರೂಪವು.)

# ನನ್ನ ಸಾವನ್ನು ಕುರಿತು

ಅಕ್ಷರಸ್ಥ ನಾನು,
ನನ್ನ ಹೆತ್ತವರು
ಅನಕ್ಷರಸ್ಥ ಕಲ್ಲು ಕುಟಿಗರು.

ಅಕ್ಷರ ಕಲಿತು ಪುಸ್ತಕ ಬರೆದು
ಖುರ್ಚಿ ಏರುವವರೆಂದರೆ
ಎಲ್ಲಿಲ್ಲದ ಹೊಟ್ಟೆಯುರಿ ಈ ಜಗಕೆ.
ನಾನು–ನನ್ನ ಪುಸ್ತಕ
ಪ್ರಶ್ನಿಸುವುದು–ಇರಾದೆ ಮಾಡುವುದು
ಬೇಕಿಲ್ಲ ಇವರಿಗೆ

ಯಾಕೆಂದರೆ
ನನ್ನ ಪುಸ್ತಕ ಮಾತನಾಡದವರ ಕುರಿತು ಮಾತನಾಡುತ್ತವೆ
ಅದರೊಳಗಿನ ಶಬ್ದಗಳು ಉಸಿರಾಡುತ್ತವೆ
ಈ ನೆಲಕ್ಕೆ
ಉಸಿರಾಗಿ, ಜಗಕ್ಕೆ ಹಸಿರಾಗಿ
ಹಸಿವಿನಲಿ ತೊಯ್ದವರಿಲ್ಲಿ ಕಾಣಸಿಗುತ್ತಾರೆ
ಅವರೂ
ಮಾತನಾಡುವ ಮನುಷ್ಯರೆಂಬುದು ತಿಳಿಯುತ್ತದೆ.

ಹರಿವ ನೀರಿನ ಹಾಗೆ
ಈ ಜನ
ಈ ನನ್ನ ಪುಸ್ತಕ—ಎನ್ನುವುದು ಗೊತ್ತಾಗುತ್ತದೆ.
ಅಪ್ಪ ಅವ್ವನ ಹಾಗೆ
ಅನಕ್ಷರಸ್ಥನಾಗಿ
ಕಲ್ಲು ಕಟಿದಿದ್ದರೆ
ಇದ್ದವರಿಗೆ ಇವರಾರತ್ತು, ಕಟ್ಟಿದ್ದರೆ
ಚಿಮಣಿಯ ಬೆಳಕಲ್ಲಿ
ಗುಡಿಸಲಲ್ಲಿ ಒದ್ದಾಡಿ ಬದುಕುತ್ತಿದ್ದೆ

ಭಾಷಣಗಳಿಗೆ ಆಹಾರವಾಗುತ್ತಿದ್ದೆ
ಪಾಪ-ಕರ್ಮಗಳ ಕಾಲಿಗೆ ಬಿದ್ದು ದಾರಿ ಹೆಣವಾಗುತ್ತಿದ್ದೆ

ಬಿಲದೊಳಗಿನ ಹಿಕ್ಕಿಯಾಗದೆ
ಅಕ್ಷರಸ್ಥನಾಗಿ ಪುಸ್ತಕ ಬರೆದದ್ದು
ಇವರ ಕಣ್ಣು ನೆಟ್ಟಗಾಗಿಸಿದ್ದು ಸಹಜ.
ನನ್ನ ನೋವನ್ನು ಲೆಕ್ಕಿಸದೆ
ನನ್ನ ಸಾವನ್ನು ಕುರಿತು
ಅವರೀಗ ಚಿಂತಿಸುವದು ಸಹಜ.

ಕಾಲ ಗತಿಸುತ್ತದೆ
ಜನ ನನ್ನನ್ನು ಸತ್ತನೆಂದೇ ಹೂಳುತ್ತಾರೆ
ಆದರೆ ನಾನು ಸಾಯುವದಿಲ್ಲ
ನನ್ನ ಪುಸ್ತಕದ ಅಕ್ಷರಗಳಲ್ಲಿ ಚಿಗುರಿ
ಪದ್ಯವಾಗಿ ಗದ್ದರಿಸುತ್ತೇನೆ.

**ಹೊರೆಯಾಲ ದೊರೆಸ್ವಾಮಿ**

---

## ಉಯ್ಯಾಲೆ ಮಣೆ ಮೇಲೆ

ಬೇಸಗೆಯ ಹೊಳೆಯಂತೆ
ಬತ್ತಿ ಹೋದ ಭಾವಗಳಲ್ಲಿ
ಸತ್ತು ಹೋದ ನಿನ್ನೆಗಳಲ್ಲಿ
ಮತ್ತೆ ಹುಡುಕುವ ಆಸೆ

ಚಿಗುರಿದ ದಿನಗಳು
ಹಸಿರು ತುಂಬಿದ ಹಗಲುಗಳು
ದಿಮ್ಮನೆ ಬಿದ್ದ ಬದುಕಿನ ಅಲ್ಲಲ್ಲಿ ಸಿಕ್ಕ ಎಳೆನೂಲುಗಳು
ಬಿಗಿದಿವೆ ನನ್ನ
ತಿಂದದ್ದು ಹಾಲು ಅನ್ನ

ಚುಮುಗುಟ್ಟುವ ಎಳೆಬಿಸಿಲ
ರಾಶಿ ಮಿಂಚುಗಳಲ್ಲ ಬೆಳೆದ ಜೋಳದ ಮೇಲೆ
ಹಸಿರು ಹೊಲಗಳ ಮೇಲೆ ತೆಂಗು ಬಾಳೆಗಳಲ್ಲಿ
ಅವರೆ ಸಾಲುಗಳಲ್ಲಿ
ಧುಮು ಧುಮುಕಿ ಚಿಮ್ಮಿದವು
ಮಣ್ಣೊಳಗೆ ಅರಳಿದವು
ಹುಡಿಮಣ್ಣು ಮಿಡಿಕಾಯಿ
ಜೊಂಪೆಜೊಂಪೆಯಾಗಿ ತೂಗಿ ತೊನೆದಾಡಿದವು
ಮರದ ಟೊಂಗೆ ಟೊಂಗೆಗಳಲ್ಲಿ
ತೂಗಾಡಿದವು ನನ್ನ ಮಿದುಳ ಬಳ್ಳಿಗಳನ್ಹಿಡಿದು
ಉಯ್ಯಾಲೆಯಾಟದಲಿ ನನ್ನ ಕನಸು ಮನಸುಗಳೆಲ್ಲ
ಉನ್ಮಾದಗೊಂಡವು ಉನ್ಮತ್ತಗೊಂಡವು

ದಿಕ್ಕು ದಿಕ್ಕಿಗೆ ಚಾಚಿ ಹರಿದೋಡಿತುಯ್ಯಾಲೆ
ಕೂತ ನನ್ನನೂ ಕೂಡ ಎಸೆದಿತ್ತು ಮುಂದಾಚೆ
ಊರಾಚೆ ಗಡಿಯಾಚೆ ನನ್ನ ನೆನಪಿನ ಆಚೆ

ಬೆಕ್ಕಸ ಬೆರಗಾಗಿ ಇದ್ದುದೆಲ್ಲ ನೀರಾಗಿ
ಒದ್ದೆ ಚಡ್ಡಿಯ ನಾನು
ಎದ್ದೆ ಅಜ್ಜಿಯ ಬಳಿಗೆ
ಎತ್ತಿ ಮುದ್ದಾಡಿದಳು ಅಜ್ಜಿ
ಬಿದ್ದು ಒದ್ದಾಡಿದಳು
ಹೋಗದಿರು ಮನೆಯಾಚೆ ಕಾಲಿಕ್ಕದಿರು ಉಯ್ಯಾಲೆಯೊಳಗೆ
ಅಂದ
ಅಜ್ಜಿಯ ಸೀರೆಯೊಳಗೊಳಗೆ ಮುದುಡಿದೆನು ನಾನು
ತುಂಬಾ ನಿದ್ದೆಯ ನಡುವೆ ಮಿದುಳು ಬಳ್ಳಿಯ ಹಿಡಿದು
ಮತ್ತೆ ಉಯ್ಯಾಲೆಯಂದೊ ತನ್ನ ಸಕ್ಕರೆಯ ತೋಳುಗಳಲ್ಲಿ
ಕರೆಯಿತು ನನ್ನ ಅಕ್ಕರೆಯಿಂದ
'ಬಾ ಬಾ ಹುಡುಗ ಉಯ್ಯಾಲೆಯಾಡು ಬಾ'

ಉಯ್ಯಾಲೆ ಮಣೆಯಲ್ಲಿ
ಹಸಿರು ಹಳದಿ ಕೆಂಪು
ನೀಲಿ ಹೂಗಳ ಹುಡುಗಿ
ಚೆಲುವ ಚಿಮ್ಮುವ ತುಡುಗಿ
ಹೊಸದಾಗಿ ಬಂದಿಹಳು ಹೊಸಹುಟ್ಟು ಹುಟ್ಟಿದಳು

ಆಸೆ ಚಿಮ್ಮಿತು
ಕರೆಯಿತು ನನ್ನ ಒಳಗನ್ನ
ಅಜ್ಜಿ ಸೀರೆಯ ನಾನು ಮೆಲ್ಲಗ್ಹಿಂದಕೆ ಸರಿಸಿ
ಕದ್ದು ಬಿದ್ದೋಡಿದೆನು
ಉಯ್ಯಾಲೆ ಸೇರಿದೆನು
ಉಯ್ಯಾಲೆ ಮಣೆಮೇಲೆ
ಮುದ್ದುಗಣ್ಣಿನ ಮುಂಗುರುಳ ಹುಡುಗಿಯು
ಓರೆಗಣ್ಣಲಿ ನಗುತ
ತುಟಿಯ ತೊಟ್ಟಿಲಿನಲ್ಲಿ ತೂಗಾಡಿದಳು ತಬ್ಬಿ
ಒತ್ತಿದಳು ಮೊಲೆತೊಟ್ಟು
ಹಿಂಡಿದಳು ಹಾಲಿಷ್ಟು

ಹಾಲು ಕುಡಿದೆನು ನಾನು ಹಾಲೋಗರೆಂಬಂತೆ
ಹಾಲು ಹಾಲಾಹಲವಾಗಿ
ಇಂಚಿಂಚಿಗೂ ಹರಡಿ ದೇಹ ವ್ಯಾಪಿಸಿ ನನ್ನ
ನೀಲಿಗಟ್ಟಿತು ಬುದ್ಧಿ ಭಾವ ಬೆಳಕು
ಇನ್ನೆಲ್ಲಿಯ ಬದುಕಿನ ಹೊಳಪು ?

ಅಯ್ಯೊ ಸತ್ತೆ
ಕಪ್ಪಿಟ್ಟಿತು ಬದುಕು
ಹೆಪ್ಪು ಒಡೆದಿದೆಯಲ್ಲ
ಬೆಳಕಿನರಮನೆಯಲ್ಲಿ
ಕಪ್ಪು ಆವರಿದಾವಲ್ಲ.

# ಸಂಪಾದಕಾಯಣ

## ಪುರುಷೋತ್ತಮ ಬಿಳಿಮಲೆ

ಚಂಪಾ ಚಂದಾಯಣ ಓದಿದ ಮೇಲೆ, ಸಂಪಾದಕಾಯಣ ಬರೆಯದೇ ಹೋದರೆ, ನಾನು ಜಾನಪದ ಓದಿದ್ದೇ ವ್ಯರ್ಥವಾಗುತ್ತದೆ. ಏಕೆಂದರೆ ಜಾನಪದ ಅಧ್ಯಯನದಲ್ಲಿ ಈಚಿನ ದಿನಗಳಲ್ಲಿ ಭಿನ್ನಪಾಠಗಳಿಗೆ ಆದ್ಯತೆ ನೀಡಲಾಗುತ್ತಿದೆ. ನನ್ನ ಗೆಳೆಯ ಚಿನ್ನಪ್ಪಗೌಡರಂತೂ 'ಭಿನ್ನಪಾಠಗಳೆಲ್ಲ ಸ್ವತಂತ್ರ ಪಾಠಗಳೇ... ಅವನ್ನು ಪಾಠಾಂತರ ಗಳೆಂದು ಕರೆಯಕೂಡದು' ಎಂದು ಬಲವಾಗಿ ವಾದಿಸುತ್ತಾರೆ. ಹಳೆಯ ತಲೆಮಾರಿನ ಕೆಲವು ವಿದ್ವಾಂಸರು ಮಾತ್ರ ಭಿನ್ನಪಾಠಗಳನ್ನು ಇದಿರು ಇರಿಸಿಕೊಂಡು, ಸಾಮಾನ್ಯ ಪಾಠವೊಂದನ್ನು ಸಿದ್ಧಪಡಿಸಿಕೊಡುತ್ತಾರೆ. ಇವರಿಗೆ ಗ್ರಂಥ ಸಂಪಾದನೆಯ ಪರಿಚಯವಿದ್ದಂತಿದೆ. ನಾನು ತರ್ಕಬದ್ಧವಾಗಿ ಊಹಿಸುವದಾದರೆ, ನಿಮಗೆ ಗ್ರಂಥ ಸಂಪಾದನಾ ಶಾಸ್ತ್ರದ ಪರಿಚಯ ಇರಲಾರದು. ದುಡ್ಡು ಕೊಟ್ಟು, ಕಡತಂದು, ಇಲ್ಲವೇ ಕದ್ದು ತಂದು ಗ್ರಂಥ ಸಂಪಾದನೆ ಮಾಡುವ ಬಗ್ಗೆ ನಾನಿಲ್ಲಿ ಮಾತಾಡುತ್ತಿಲ್ಲ. ಅದು ಹೌದಾಗಿದ್ದರೆ ನಿಮ್ಮನ್ನು 'ಗ್ರಂಥ ಸಂಪಾದಕರು' ಎಂದು ಕರೆಯಬಹುದಿತ್ತು. ಇರಲಿ ಜಾನಪದದಲ್ಲಿ ಗ್ರಂಥ ಸಂಪಾದನೆ ಎಂಬುದು ಇಲ್ಲವಾದ್ದರಿಂದ ಈ ಸಂಪಾದನಾ ಕಾರ್ಯವನ್ನು ನೀವು ಒಂದು ಪ್ರತ್ಯೇಕ ಪಾಠ ಎಂದು ಗ್ರಹಿಸಿಕೊಂಡರೆ ಸಾಕು, ಈ ಪ್ರತ್ಯೇಕ ಪಾಠವನ್ನು 'ರಚನಾ ವಿರಸನ ವಾದಿಗಳು' ( De-construction ವಾದಿಗಳು ) 'ರಚನಾ ವಿರಸ' ಎಂದು ಓದಿದರೆ ಅದೂ ಒಂದು ಭಿನ್ನ ಪಾಠವಾಗುತ್ತದೆ. ಆದರೆ ಅದು ನನ್ನ ಪಾಠವಲ್ಲ, ಬಹುಶಃ ಚಂಪಾನ ಪಾಠವೂ ಅಲ್ಲ. ಏಕೆಂದರೆ ನಮ್ಮ ಪತ್ರದಲ್ಲಿ 'ವಿರಸ' ಇಲ್ಲ. ಹೆಚ್ಚೆಂದರೆ 'ಸರಸ' ಇರಬಹುದು.

ಚಂಪಾನ 'ಸಂಕ್ರಮಣ ಚಂದಾಯಣ'ದ ನೋಟ ಸಂಪಾದಕರ ಕಡೆಯಿಂದ ಓದುಗರ ಕಡೆಗೆ ಹೊರಟಿದೆ. ನಾನಂತೂ ಬಂಡಾಯದವನೇ! ನನ್ನ ನೋಟ ಓದುಗರ ಕಡೆಯಿಂದ ಹೊರಟು ಸಂಪಾದಕರ ಕಡೆಗೆ ಚಲಿಸುತ್ತದೆ. 'ಬಂಡಾಯ ನಿರಂತರವಾಗಿರಬೇಕು' ಎಂದು ಕೂಗಾಡುವ ಚಂಪಾನೇ ಇದಕ್ಕೆ ಪ್ರೇರಣೆ. ಚಂಪಾ ಹೇಗೆ ಸಂಪಾದಕರಾದರೋ [ಏಕೆ. ಅಲ್ಲ!] ನನಗೆ ಗೊತ್ತಿಲ್ಲ. ನನಗೆ ಗೊತ್ತಿರುವ ಇನ್ನೊಬ್ಬ ಸಂಪಾದಕರು ಹೇಗೆ ಸಂಪಾದಕರಾದವರು ಎಂದು ನನಗೆ ಚೆನ್ನಾಗಿ ಗೊತ್ತಿದೆ. ಹೇಳಿದರೆ ಹೆಗಲು ಮುಟ್ಟಿ ನೋಡಿಕೊಳ್ಳುವವರು ಕ್ಷಮಿಸಬೇಕು.

ಆ ನನ್ನ ಗೆಳೆಯ, ಸಂಪಾದಕನಾಗುವ ಮುನ್ನ ಬರಹಗಾರನಾಗಿದ್ದ. ಅಂತಿಂಥ ಬರಹಗಾರನಲ್ಲ. ಬಹಳ ತೀವ್ರಗಾಮಿ ಬರಹಗಾರ. ಅಂದರೆ ಅವನ ಬರೆಹ, ತಕ್ಷಣ ಪತ್ರಿಕೆಗಳ ಕಡೆಗೆ 'ಗಮಿ'ಸುತ್ತಿತ್ತು. ಬೆಳಗ್ಗೆ ಬರೆದರೆ ಸಾಯಂಕಾಲದ ಅಂಚೆಯಲ್ಲಿ ಅದು ಹೋಗಲೇ ಬೇಕು. ಒಮ್ಮೆಯಂತೂ ಅವನ ಲೇಖನ ಕಾರ್ಯ ಮಧ್ಯರಾತ್ರಿ ಹೊತ್ತಿಗೆ ಮುಗಿಯಿತು ಅದೇ ಕ್ಷಣ ಅದನ್ನು ಕವರಿಗೆ ತುಂಬಿಸಿ, ರಾತ್ರಿಯೇ ಸ್ಕೂಟರ್‌ನಲ್ಲಿ ಆರ್. ಎಂ. ಎಸ್. ಗೆ ರವಾನಿಸಿದ. ನಿಜಕ್ಕೂ ಇಂಥ 'ಉಗ್ರಗಾಮಿ' ಯನ್ನು ನಾನು ಇದುವರೆಗೆ ಕಂಡೇ ಇಲ್ಲ. ಈ ತೀವ್ರಗಾಮಿ ಲೇಖಕ ಸ್ನೇಹಿತ, ಭಾರತೀಯ ಜಾತಿ ಪದ್ಧತಿಯಿಂದ ಭಾರೀ ಪ್ರೇರಣೆ ಪಡೆದಿದ್ದ. ಜಾತಿಪದ್ಧತಿಯ ಶ್ರೇಣೀಕರಣ ತಾತ್ತ್ವಿಕತೆಯಿಂದ ಬುದ್ಧಿ ಕಲಿತ ಆತ ಪತ್ರಿಕೆಗಳಲ್ಲೂ ಶ್ರೇಣೀಕರಣ ಮಾಡಿಕೊಂಡಿದ್ದ. ಅಂತಾರಾಷ್ಟ್ರೀಯ ಪತ್ರಿಕೆಗಳು ಅವನ ಪ್ರಕಾರ ಶ್ರೇಷ್ಠ ಜಾತಿಯವು. ಸ್ಥಳೀಯ ಮಟ್ಟದ ಪತ್ರಿಕೆಗಳು ಅತ್ಯಂತ ಕೆಳಜಾತಿಯವು. ಉಳಿದವು ಅಂದರೆ ರಾಷ್ಟ್ರಮಟ್ಟದ, ರಾಜ್ಯಮಟ್ಟದ, ಜಿಲ್ಲಾ ಮಟ್ಟದ ಪತ್ರಿಕೆಗಳು ಮಧ್ಯಮ ಜಾತಿಯ ಶೂದ್ರಗಳು. ಸಹಜವಾಗಿ ಅವನ ಮೊದಲ ಆಯ್ಕೆ ಶ್ರೇಷ್ಠ ಜಾತಿಗೆ ಸೀಮಿತ. ಲೇಖನ ಅಲ್ಲಿಗೆ ಕಳಿಸುತ್ತಾನೆ. ಅಲ್ಲಿಂದ ಹಿಂದೆ ಬಂದರೆ ಶ್ರೇಣೀಕರಣದ ಎರಡನೇ ಹಂತಕ್ಕೆ ಇಳಿದು, ರಾಷ್ಟ್ರ ಮಟ್ಟದ ಪತ್ರಿಕೆಗೆ ಕಳುಹಿಸುತ್ತಾನೆ. ಅಲ್ಲಿಂದಲೂ ಹಿಂದೆ ಬಂದರೆ ರಾಜ್ಯ ಮಟ್ಟ, ಅನಂತರ ಜಿಲ್ಲಾಮಟ್ಟ, ತಾಲೂಕುಮಟ್ಟ, ಮಂಡಲ ಮಟ್ಟ... ನನಗೆ ತಿಳಿದ ಹಾಗೆ ಆ ಲೇಖಕ ಮಿತ್ರನ ಲೇಖನವೊಂದು ಮಂಡಲ ಮಟ್ಟದ ಪತ್ರಿಕೆಯಲ್ಲೂ ಪ್ರಕಟವಾಗದೆ ಹಿಂದೆ ಬಂತು. ಏನು ಮಾಡೋಣ ಹೇಳಿ? ಸರಸ್ವತಿಯ ಭಂಡಾರ ಮುದ್ರೆಯನ್ನೊಡೆದು ಮುತ್ತುಗಳನ್ನು ತಂದರೂ ಕೊಳ್ಳುವವರಿಲ್ಲ. ಕೊಳ್ಳುವವರಿಲ್ಲದೆ ಮುತ್ತುಗಳನ್ನು ಕೊಡುವವಾದರೂ ಹೇಗೆ? 'ಪೊಸ ಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿ' ಹೋಯಿತು. ಲೇಖಕನ ಬದುಕಿನ ದುರಂತದ ತುರಿಯಾವಸ್ಥೆ ಕಾಣುವುದೇ ಅಲ್ಲಿ! ಬಹುಶಃ ಇಂಥ ವಿಷಾದದಲ್ಲಿಯೇ

ಇರಬೇಕು, ಆ ಮಿತ್ರ ತಕ್ಷಣ ಬರಬೇಕೆಂದು ಹೇಳಿಕಳಿಸಿದ. ಅವನ ಬರಹಗಳ ಏಕೈಕ ನಿಷ್ಠಾವಂತ ಓದುಗ ನಾನು, ಏಕೆಂದರೆ ನನಗೆ ಅವನಷ್ಟು ಬರೆಯಲು ಬರುತ್ತಿರಲಿಲ್ಲ. ಲೇಖಕರ ಮೇಲಿನ ಗೌರವದಿಂದ ಓಡಿದೆ. ಆಕಾಶವೇ ತಲೆ ಮೇಲೆ ಬಿದ್ದಂತೆ ಕುಳಿತಿದ್ದ. ನನ್ನ ಕಂಡ ತಕ್ಷಣ ಸಿಡಿದೆದ್ದ, ಹೇಳಿದ–

"ಏನಯ್ಯಾ . ಒಂದು ಪತ್ರಿಕೆ ಹೊರತರಲು ನಿರ್ಧರಿಸಿದ್ದೇನೆ.
ಮೂರು ವರ್ಷದ ಚಂದಾ ಕೊಡು"

ನನಗೆ ಗಡಿಬಿಡಿ. ಮೂರು ವರ್ಷದ ಚಂದಾ ಎಷ್ಟು ? ನೂರು, ಇನ್ನೂರು, ಮುನ್ನೂರು.. ಸಾವರಿಸಿಕೊಂಡು ಕೇಳಿದೆ..

"ಯಾಕಯ್ಯ.. ನಿನ್ನ ಲೇಖನ ಎಲ್ಲೂ ಪ್ರಕಟವಾಗಲಿಲ್ವೇ.." ಅವನ ಮುಖ ಇನ್ನಷ್ಟು ಉಗ್ರವಾಯಿತು. ಹೇಳಿದ..

"ಅದೆಲ್ಲ ಅಧಿಕ ಪ್ರಸಂಗ ನಿನಗ್ಯಾಕೆ ? ದುಡ್ಡಿಲ್ಲದಿದ್ದರೆ ಹೇಳು.. ನಾನೇ ಕೊಡ್ತೇನೆ"

ನನಗೆ ಒಳ್ಳೆ ಫಜೀತಿ. ಜಗಳ ಮಾಡುವುದು ಹೇಗೆ ? ನಾಳೆ ಮುಖ ನೋಡಬೇಡವೇ ? ಮೇಲಾಗಿ ಜಗಳದ ಸಾಧ್ಯತೆಗಳನ್ನೆಲ್ಲ ಚಂಪಾ–ಪೋಲಂಕಿ-ಲಂಕೇಶ ಮುಗಿಸಿ ಬಿಟ್ಟಿದ್ದಾರೆ. ಮತ್ತೆ ನಾನು ಜಗಳ ಮಾಡಿದರೆ ಚೆನ್ನಾಗಿರುವುದಿಲ್ಲ ಎಂದುಕೊಂಡು, ಮುಂದಿನ ತಿಂಗಳ ದಿನಾಂಕ ಹಾಕಿ. ಚೆಕ್ ಕೊಟ್ಟು, ದಿಢೀರ್ ಸಂಪಾದಕನ ಅಪಾಯದಿಂದ ಪಾರಾದೆ. ಚಂಪಾನಂತವರು ಚನ್ನಾಗಿ ತಿಳಿದುಕೊಳ್ಳಬೇಕು: ಲೇಖನ ವಾಪಸು ಕಳಿಸಿದರೆ, ಬರಹಗಾರ ಸಂಪಾದಕನಾಗಿ ಮಾರ್ಪಡುತ್ತಾನೆ, ಪೆಟ್ಟು ನನ್ನಂಥವನಿಗೆ!

ಇನ್ನೊಬ್ಬ ಸಂಪಾದಕ ಮಿತ್ರ ಇದ್ದಕ್ಕಿದ್ದಂತೆ ಬಂಡಾಯ ಚಳುವಳಿಯನ್ನು ಹೊಗಳತೊಡಗಿದ. ನನಗೆ ಸಂತೋಷ ಆದರೆ ಒಳಗೊಳಗೇ ಭಯ. ನಮ್ಮ ವೈರಿಗಳೆಲ್ಲ ನಮ್ಮನ್ನು ಹೊಗಳತೊಡಗಿದರೆ ನಾವು ಬಂಡಾಯ ಮಾಡುವುದು ಯಾರ ವಿರುದ್ಧ ? ಆದರೆ ನನ್ನ ಹೆದರಿಕೆ ಒಂದು ಶನಿವಾರ ಮಾಯವಾಯಿತು. ಆ ಸ್ನೇಹಿತ ಹೇಳಿದ–
"ನಿಮ್ಮ ಬಂಡಾಯದ ಸ್ನೇಹಿತರನ್ನು ನನ್ನ ಪತ್ರಿಕೆಗೆ ಚಂದಾದಾರರನ್ನಾಗಿ ಮಾಡಿ."

ಬೆಂಗಳೂರಿನ ದೊಡ್ಡ ಸಾಹಿತ್ಯ ಸಮಾವೇಶದಲ್ಲಿ ಸಂಪಾದಕರೊಬ್ಬರು ನನಗೆ ಗಂಟು ಬಿದ್ದರು. ಅಪಾಯದಿಂದ ಪಾರಾಗಲು ಆಜೀವ ಚಂದಾ ನೀಡಿದೆ. ಅವರು ರಶೀದಿ ನನ್ನ ಕೈಗೆ ಕೊಟ್ಟಾದ ಮೇಲೆ ಹೇಳಿದರು. "ನೀವು ಬಿಡಿ ಸಾರ್... ಚಂದಾನೇ ಕೊಡಬೇಕಿಲ್ಲ... ನಿಮ್ಮಂಥ ವಿಮರ್ಶಕರಿಗೆ ನಾವು ಪುಕ್ಕಟೆಯಾಗಿ ಪತ್ರಿಕೆ ನೀಡುತ್ತೇವೆ .. ಬೇರೆಯವರದ್ದು ಸ್ವಲ್ಪ ಮಾಡಿಕೊಡಿ." ಸರಿ. ನಾನು ಸಂಪಾದಕನೊಂದಿಗೆ ತಿರುಗಾಡಲು ತೊಡಗಿದೆ. ನನ್ನ ಹಳೆಯ ಸ್ನೇಹಿತೆಯೊಬ್ಬಳು ಸಿಕ್ಕಿದಳು. ಪುಸಲಾಯಿಸಿ ಚಂದಾಕೊಡಿಸಿದೆ. ಅನಂತರದ ಚಂದ ನೋಡಿ! ಸುಮಾರು ಒಂದೂವರೆ

ವರ್ಷ ಕಳೆದ ಮೇಲೆ ಆಕೆಯಿಂದ ನನಗೊಂದು ಪತ್ರ "ನಿನ್ನ ಮುಖನೋಡಿ ಚಂದಾ ಕೊಟ್ಟೆ.... ಇಷ್ಟು ಕಾಲದಲ್ಲಿ ಒಂದಾದರೂ ಪತ್ರಿಕೆ ಕಳಿಸಬೇಡವಾ ?" ನಾನು ಆ ಪತ್ರವನ್ನು ನನ್ನ ಸಂಪಾದಕ ಮಿತ್ರನಿಗೆ ಕಳಿಸಿಕೊಟ್ಟೆ. ಎದುರು ಸಿಕ್ಕಾಗ ಆತ ಹೇಳಿದ... "ಆಕೆಗೆ ಸಂಸ್ಕೃತಿ ಎಂಬುದು ಇದೆಯೇನಯ್ಯಾ...? ಇವರಿಗೆಲ್ಲ ಪತ್ರಿಕೆ ಬರಲಿಲ್ಲ ಅಂತ ಯೋಚನೆ. ಸಂಪಾದಕರಿಗೆ ಎಷ್ಟು ಕಷ್ಟ ಇದೆ ಅಂತ ಸ್ವಲ್ಪ ವಾದರೂ ತಿಳೀತದೆಯಾ ? ನನ್ನ ಸಂಬಳದ ಹಣವೆಲ್ಲ ಅದಕ್ಕೆ ಮುಗಿಯುತ್ತಿದೆ."

"ಅದು ಸರಿ ಮಹಾರಾಯಾ... ಅವಳಿಗೆ ಒಂದು ಸಂಚಿಕೆಯನ್ನಾದರೂ ಕಳಿಸಬಾರದೇ" ಎಂದೆ ನಾನು.

"ನಿನಗ್ಯಾಕೆ ಅಷ್ಟು ಇಂಟರೆಸ್ಟು? ನಿನಗೇನಾಗಬೇಕು ಅವಳು?"

ನಾನು ಜಾಗ ಖಾಲಿ ಮಾಡಿದೆ. ನಮ್ಮ ಇಂಟರೆಸ್ಟು ಏನಿದ್ದರೂ ಚಂದಾ ದೊರಕಿಸಿ ಕೊಡಲು ಮಾತ್ರ ಸೀಮಿತವಾಗಿರಬೇಕೆಂದು ಭಾವಿಸಿ ನಡೆದುದೆಲ್ಲವನ್ನು ಆಕೆಗೆ ಬರೆದೆ. ಆಕೆ ಸ್ತ್ರೀವಾದಿ. ಬಿಡುತ್ತಾಳೆಯೇ ?

"ನಿಮಗಿಬ್ಬರಿಗೂ ಜವಾಬ್ದಾರಿಯಿಲ್ಲ. ನಾನು ದುಡಿದು ಸಂಪಾದಿಸಿದ ಹಣವದು. ಪತ್ರಿಕೆ ಕೊಡುತ್ತೇನೆ ಎಂದು ಹೇಳಿ ಚಂದಾ ಎತ್ತಿದ ಹಣವಲ್ಲ ಅದು!" ಎಂದು ನನಗೇ ದಬಾಯಿಸಿ ಬರೆದಳು. 'ಎಮ್ಮೆ-ಕೋಣಗಳು ಹೋರೆ ಪುರುಷರಿಗೆ ಮೃತ್ಯು' ಸಮಯ ನೋಡಿ ಪತ್ರವನ್ನು ಸಂಪಾದಕರ ಮೇಜಿಗೆ ದಾಟಿಸಿದೆ. ಮತ್ತೆ ಹದಿನೈದು ದಿನ ಸುದ್ದಿಯಿಲ್ಲ. ಇದ್ದಕ್ಕಿದ್ದಂತೆ ನನಗೊಂದು ರಜಿಸ್ಟರ್ಡ್ ಪತ್ರ, ಒಡೆದು ಓದಿದರೆ ಆ ನನ್ನ ಚಂದಾದಾರೆ ಸ್ನೇಹಿತೆಯದ್ದು. ದೀರ್ಘವಾಗಿದೆ ಬೇರೆ. ಅದರಲ್ಲಿ ಆಕೆ ತನ್ನದು ಸರ್ವ ತಪ್ಪೆಂದೂ. ರೇಗಾಡಿದ್ದು ತಪ್ಪಾಯಿತೆಂದೂ, ಈ ವಿಷಯದಲ್ಲಿ ತಾನು ತಾಳ್ಮೆಯಿಂದ ವರ್ತಿಸಬೇಕಿತ್ತೆಂದೂ... ಹೇಗಾದರೂ ಮಾಡಿ ಆ ಸಂಪಾದಕನೊಂದಿಗೆ ರಾಜಿ ಮಾಡಿಸಬೇಕೆಂದೂ ಗೋಗರೆದಿದ್ದಳು. ನನಗೆ ಮೂರ್ಛೆ ಬರುವದು ಮಾತ್ರ ಬಾಕಿ. ನಿಮ್ಮಾಣೆ... ನನಗಿನ್ನೂ ಗೊತ್ತಿಲ್ಲ... ಚಂದಾದಾರೆಯೇ ತಪ್ಪೊಪ್ಪಿಕೊಳ್ಳುವಂತೆ ಮಾಡಲು ಆ ನನ್ನ ಸಂಪಾದಕ ಮಿತ್ರ ಎಂಥಹಾ ಅಸ್ತ್ರ ಬಳಸಿದನೆಂದು! ಅದು ಗೊತ್ತಾದ ದಿನ ನಾನೊಂದು ಪತ್ರಿಕೆ ತರುವುದಂತೂ ಖಂಡಿತ. 'ನೀನು ಹೀಗೆ ಬರೆಯಲು ಕಾರಣ ಏನೆಂದು' ಕೇಳಿ ಆಕೆಗೆ ಪತ್ರಿಸಿದೆ. 'ದಯವಿಟ್ಟು ಆ ವಿಚಾರ ಕೇಳಬೇಡ'ವೆಂದು ಆಕೆ ಬರೆದಳು. 'ಏನು ಬರೆದೆ ಮಾರಾಯ...' ಅಂತ ಸಂಪಾದಕನನ್ನು ಕೇಳಿದೆ. 'ಹೋಗು ಆಕೆಯನ್ನೇ ಕೇಳು... ನಿನ್ನ ಸ್ನೇಹಿತೆಯಲ್ವಾ...?' ಅಂತ ಅವನ ಉತ್ತರ. ದಯವಿಟ್ಟು ಹೇಳಿ–ಆತ ಏನು ಬರೆದಿರಬಹುದು ?

ಸಾಕ್ಷರತಾ ಆಂದೋಲನದ ಸಮಯ ಸಾಕ್ಷರತೆಗಾಗಿ ಯಕ್ಷಗಾನದ ಬಳಕೆಯ ಬಗೆಗೆ ಕೆಲಸ ಮಾಡುತ್ತಿದ್ದೆ. ಯೂನಿಸೆಫ್‌ನವರು ೩೦ ಸಾವಿರ ಕಳಿಸಿದ್ದರು. ಅವು ನೀರಿನಂತೆ ಖರ್ಚಾಗುತ್ತಿತ್ತು. ಲೆಕ್ಕ ಪತ್ರ ಬೇರೆ ಇಟ್ಟುಕೊಳ್ಳಬೇಕು. ದಿಢೀರನೆ ಒಬ್ಬ ಬಂದ. ನಾನು ಇಂತಹ ಪತ್ರಿಕೆಯ ಸಂಪಾದಕನೆಂದು ಪರಿಚಯಿಸಿಕೊಂಡ. ನೂರು ರೂಪಾಯಿ ಚಂದಾ ಕೇಳಿದ. ಕೊಟ್ಟೆ. ರಶೀದಿ ಕೊಟ್ಟ. ಎಲ್ಲಿಯೋ ಇರಿಸಿದೆ. ಸುಮಾರು ೧೦ ತಿಂಗಳ ಕಳೆದಾದ ಅನಂತರ ಆ ರಶೀದಿ ಸಿಕ್ಕಿತು. ತಕ್ಷಣ ಸಂಪಾದಕನಿಗೆ ಬರೆದೆ— "ಸ್ವಾಮೀ ಕಳೆದ ೧೦ ತಿಂಗಳಿಂದ ಒಂದೂ ಪತ್ರಿಕೆ ಬರಲಿಲ್ಲವೇ? ನಾನು ಮೂರು ವರ್ಷದ ಚಂದಾ ನೀಡಿದ್ದೇನೆ. ರಶೀದಿಯ ಝೆರಾಕ್ಸ್ ಪ್ರತಿ ಇರಿಸಿದ್ದೇನೆ. ದಯಮಾಡಿ ಪತ್ರಿಕೆ ಕಳಿಸಿರಿ". ಸುಮಾರು ೧೫ ದಿನ ಕಳೆದು ೧೫ ಪೈಸೆ ಕಾರ್ಡಿನಲ್ಲಿ ಸಂಪಾದಕರು ಬರೆದ ಉತ್ತರದ ಯಥಾನಕಲು-"ಸ್ವಾಮಿ ಬಿಳಿಮಲೆಯವರೇ. . ನೀವು ವಿಶ್ವವಿದ್ಯಾಲಯದ ಪ್ರಾಧ್ಯಾಪಕರು. ಸಾವಿರಾರು ರೂಪಾಯಿ ಸಂಪಾದನೆ ಮಾಡುತ್ತೀರಿ... ಆಂದೋಲನದಲ್ಲೂ ಕಿಸೆ ಭರ್ತಿಮಾಡಿಕೊಂಡಿರಿ. ಭಂಡಾಯದವರು ಬೇರೆ... ನೂರು ರೂಪಾಯಿಗೆ ಪತ್ರ ಬರೆಯುತ್ತೀರಲ್ಲ? ನಮ್ಮ ಕಷ್ಟ ಅರ್ಥ ಆಗದ ನೀವು ಎಂಥ ಭಂಡಾಯ? ನಮ್ಮದು ಒಂದು ಸಂಚಿಕೆ ಬಂದಿದೆ. ಅನಂತರ ಪತ್ರಿಕೆ ನಿಂತಿದೆ. ಮೊದಲ ಸಂಚಿಕೆ ಕಳಿಸಲು ಪ್ರತಿಗಳು ಉಳಿದಿಲ್ಲ. ಶೋಷಣೆಯ ಬಗ್ಗೆ ಮಾತನಾಡುವ ನಿಮಗೆ ಶೋಷಣೆ ಮಾಡಲು ಅಧಿಕಾರವಿಲ್ಲ... ನಮಸ್ಕರಿಸುವ-ನಿಮ್ಮ ಸಂಪಾದಕ."

ಇನ್ನೊಂದು ವಿಶ್ವವಿದ್ಯಾಲಯದಲ್ಲಿರುವ ಸಂಪಾದಕರ ಬಗ್ಗೆ. ಆ ವಿಶ್ವವಿದ್ಯಾಲಯದ ಸಂಚಿಕೆ ಬಹಳ ಚೆನ್ನಾಗಿ ಬರುತ್ತಿತ್ತಾದ್ದರಿಂದ ನಾನದಕ್ಕೆ ಲೇಖನ ಕಳುಹಿಸುತ್ತಿದ್ದೆ. ಲೇಖನ ಪ್ರಕಟವಾದ ಕನಿಷ್ಠ ಆರು ತಿಂಗಳ ಅನಂತವಾದರೂ ನನಗದರ ಒಂದು ಪ್ರತಿ ಬರುತ್ತಿತ್ತು. ಈ ರಗಳೆ ಬೇಡ ಎಂದುಕೊಂಡು ಒಂದು ದಿನ ಬೆಳಿಗ್ಗೆ ಆಜೀವ ಚಂದಾ ಕಳಿಸಿಬಿಟ್ಟೆ. ನನ್ನ ನಿರೀಕ್ಷೆಗೂ ಮೀರಿ ವೇಗವಾಗಿ ರಶೀದಿ ಬಂತು. ಅದೀಗಲೂ ನನ್ನ ಬಳಿ ಇದೆ. ನೀವು ನಂಬಿದರೆ ನಂಬಿ... ಬಿಟ್ಟರೆ ಬಿಡಿ. ಆ ರಶೀದಿ ನನ್ನ ಕೈಗೆ ಬಂದು ಮೂರೂವರೆ ವರ್ಷಗಳಾದವು. ಆ ವಿಶ್ವವಿದ್ಯಾಲಯದ ಒಂದೇ ಒಂದು ಸಂಚಿಕೆ ನನ್ನ ಕೈಗೆ ಬಂದಿಲ್ಲ. ಅದರರ್ಥ ಸಂಚಿಕೆ ಪ್ರಕಟವಾಗಿಲ್ಲ ಎಂದು ಅರ್ಥವಲ್ಲ! ಬಂದಿದೆ. ನಾನು ಬೇರೆಯವರ ಟೇಬಲ್ಲಿನಲ್ಲಿ ನೋಡಿದ್ದೇನೆ. ಹೆಚ್ಚೇಕೆ ನನ್ನ ಲೇಖನ ಓದಿದ ಗೆಳೆಯರು ಕೆಲವರು ಅದಕ್ಕೆ ಪ್ರತಿಕ್ರಿಯೆಯನ್ನು ಬರೆದಿದ್ದಾರೆ. ವಿಶ್ವವಿದ್ಯಾಲಯಕ್ಕೆ ಬರೆದೂ ಬರೆದೂ ಸುಸ್ತಾಗಿ ಈಗ ಪ್ರಯತ್ನವನ್ನು ಕೈ ಬಿಟ್ಟಿದ್ದೇನೆ. ನೋಡಿದಿರಾ... ಆಜೀವ ಚಂದಾದ ಮಹಿಮೆ. ಚಂದಾ ಕೊಡುವ ಮೊದಲು ಲೇಖಕನ ಪ್ರತಿಯಾದರೂ ಬರುತ್ತಿತ್ತು. ಚಂದಾ ನೀಡಿದ ಮೇಲೆ ಅದೂ ಇಲ್ಲ!

ಇಂಥ ಘಟನೆಗೆ ಅನೇಕ ಭಿನ್ನ ಪಾಠಗಳಂತೂ ಇವೆ. ಚಂದಾಯಣದಲ್ಲಿ ಚಂಪಾ ಸ್ವಲ್ಪ ಸರಿಯಾಗಿ ಬರೆದಂತೆ "ಚಂದಾ ಕಳಿಸದೇ ಇದ್ದರೂ ಸಂಚಿಕೆಗಳನ್ನು ಕಳಿಸುತ್ತಲೇ ಇರುವುದು"; ಇದರ ಸರಿಯಾದ ಪಾಠವೆಂದರೆ "ಚಂದಾ ಕಳಿಸದೇ ಇದ್ದರೇನೇ ಸಂಚಿಕೆಗಳನ್ನು ಕಳಿಸುವುದು." ಕೆಲವರು ಡ್ಯೂ ಮಾಡಿದ ಪತ್ರ ಕಳಿಸಿದ ಹಾಗೆ ತಲುಪುವುದು ಗ್ಯಾರಂಟಿ! ಚಂದಾ ಕಳಿಸಿದ ತಕ್ಷಣ ಪತ್ರಿಕೆ ಕಳಿಸುವುದು ನಿಲ್ಲಿಸಿಬಿಡುತ್ತಾರೆ. ಹೇಗೂ ಚಂದಾ ಬಂದಾಯಿತಲ್ಲ ಅಂತ ಪತ್ರಿಕೆ ಕಳಿಸುವುದನ್ನು ಬಂದ್ ಮಾಡುವ ಅವರು ಬಹುಶಃ ಚಂದಾ ಬಂದಂತೆ ಪತ್ರಿಕೆಯ ಸಂಖ್ಯೆಯನ್ನು ಕಡಿಮೆ ಮಾಡುತ್ತಾ ಹೋಗುತ್ತಾರೆ ಎಂದೆನ್ನಿಸುತ್ತದೆ. ನಿಮಗೇನಾದರೂ ಸಂಶಯ ಇದ್ದರೆ 'ಶೂದ್ರ'ಕ್ಕೆ ಚಂದಾ ಕಳಿಸಿ ನೋಡಿ.

ಈಚಿನ ದಿನಗಳಲ್ಲಿ ಯಾವುದಾದರೂ ಸಾಹಿತ್ಯ ಸಭೆಗಳಿಗೆ ಹೋಗುವುದೇ ಕಷ್ಟವಾಗಿ ಬಿಟ್ಟಿದೆ. ಅದರಲ್ಲೂ ಪ್ರಬಂಧ ಮಂಡಿಸಲು ಹೋದಿರೆಂದರೆ ಕತೆ ಮುಗಿಯಿತು. ಪ್ರಬಂಧ ಓದಿ ವೇದಿಕೆಯ ಕೆಳಗಿಳಿದು ಬರುತ್ತಿರುವಂತೆ ಬಗಲಲ್ಲಿ ಚೀಲ ಧರಿಸಿದ ಒಬ್ಬ ಪ್ರತ್ಯಕ್ಷನಾಗಿ ಬಿಡುತ್ತಾನೆ "ನಿಮ್ಮ ಪ್ರಬಂಧ ತುಂಬಾ ಚೆನ್ನಾಗಿತ್ತು ಸಾರ್... ನಿಮ್ಮದೊಂದೇ ಪ್ರಬಂಧ ಕೇಳುವಂತಿತ್ತು ಸಾರ್. ಸ್ವಲ್ಪ ನಿಮ್ಮ ವಿಳಾಸ ಬೇಕು ಸಾರ್" ಎನ್ನುತ್ತಾನೆ. ತಿಂಗಳಾನುಗಟ್ಲೆ ಒದ್ದಾಡಿ ತಯಾರಿಸಿದ ಪ್ರಬಂಧಕ್ಕೆ ಹೊಗಳಿಕೆ ಬಂದರೆ ಉಬ್ಬದೆ ಇರಲಾಗುವುದೇ? ಪಿನ್‌ಕೋಡ ಸಹಿತ ಅಡ್ರೆಸ್ ಬರೆಯುತ್ತಿರುವಾಗ ಆತ ಅನ್ನುತ್ತಿರುತ್ತಾನೆ. "ನಿಮ್ಮ ಪ್ರಬಂಧದ ವಿಷಯ ಏನು ಸಾರ್" ಠುಸ್ ಅಂತ ಧರೆಗೊರಗುವ ನೀವು ಕನ್ನಡ ವಿಮರ್ಶೆಗೆ ಒದಗಿದ ಆಪತ್ತಿನ ಬಗ್ಗೆ ಮರೆಗುವಿರಿ! ಈ ಆಪತ್ತನ್ನು ಇಲ್ಲವಾಗಿಸುವ ಹಾಗೆ ಒಂದು ವಾರದೊಳಗೆ ನಿಮ್ಮ ವಿಳಾಸಕ್ಕೆ ಚಂದಾ ನೀಡಿದ ರಶೀದಿ ಮತ್ತು ಆ ರಶೀದಿಯಲ್ಲಿ ನಮೂದಿಸಿದಷ್ಟು ಹಣವನ್ನು ಕಳಿಸಬೇಕೆಂಬ ಕೋರಿಕೆಯುಳ್ಳ ಪತ್ರ ಬಂದೇ ಬಿಡುತ್ತದೆ. ಈಚಿನ ದಿನಗಳಲ್ಲಿ 'ನಿಮ್ಮ ಪ್ರಬಂಧ ಚೆನ್ನಾಗಿತ್ತು ಸಾರ್' ಎನ್ನುವವರ ಬಗೆಗೆ ಗುಮಾನಿ ನನಗೆ, ಅವರು ಸಂಪಾದಕರು ಇರಬಹುದೇ ಅಂತ!

ಸಂಪಾದಕರ ಪರಸ್ಪರ 'ಶೀತಲಯುದ್ಧ'ಕ್ಕೂ ಬಲಿಯಾಗುವವರು ನಾವೇ? ಚಿಕ್ಕ ಪತ್ರಿಕೆಯ ಸಂಪಾದಕನ ವಾದ ಹೀಗೆ: "ಏನ್ಸಾರ್....ಸಂಕ್ರಮಣಕ್ಕೆಲ್ಲ ಚಂದಾ ಕೊಡದಿದ್ದರೂ ನಡೆಯುತ್ತದೆ. ಅದಕ್ಕೆ ರಾಜ್ಯಮಟ್ಟದ ಸಂಘಟನೆಗಳ ಬೆಂಬಲ ಇದೆ. ಲೈಬ್ರರಿಗೆ ಪ್ರತಿ ಬರುವುದಿಲ್ಲವೇ? ಅಲ್ಲಿ ಓದಿಬಿಡಿ. ನಮ್ಮದು ಚಿಕ್ಕ ಪತ್ರಿಕೆ. ನಿಮ್ಮಂಥ ಪರಿಚಯದವರು ದುಡ್ಡು ಕೊಟ್ಟರೆ ಮಾತ್ರ ನಡೆಯುತ್ತದೆ,

ಚಂದಾ ಕೊಡಿ ಸಾರ್..." ದೊಡ್ಡ ಪತ್ರಿಕೆಯ ಸಂಪಾದಕನ ವರಸೆ ಹೀಗೆ... "ಏನಯ್ಯ ಆ ಚಿಕ್ಕ ಪತ್ರಿಕೆಗೆ ನೂರಿನ್ನೂರು ಚಂದಾದಾರರಿಲ್ಲ. ಆದರಲ್ಲಿ ಬರೆವರೆ ಯಾರಿಗೆ ತಿಳಿಯುತ್ತದೆ ? ನಮ್ಮ ಪತ್ರಿಕೆಗೆ ರಾಜ್ಯದಾದ್ಯಂತ ಓದುಗರಿದ್ದಾರೆ... ಲೇಖನ ಕಳಿಸಿ ಚಂದಾ ಕೊಡಿ", ಇಂಥದ್ದನ್ನೆಲ್ಲ ಮಟ್ಟ ಹಾಕಬೇಕೆಂದು ತೀರ್ಮಾನಿಸಿ ಕೇಳಿದವರಿಗೆಲ್ಲ ಆಜೀವ ಚಂದಾ ನೀಡತೊಡಗಿದೆ. ಎಲ್ಲ ಸಂಪಾದಕರದ್ದೂ ಒಂದೇ ಉತ್ತರ: "ಇನ್ನೂ ಹತ್ತು ಗೆಳೆಯರದ್ದು ಮಾಡಿಕೊಡಿ".

ಮೊನ್ನೆ ಮೊನ್ನೆ ಒಂದು ಪತ್ರಿಕೆಯ ಸಂಪಾದಕ ಬರೆದ— "ನೋಡಿ, ನಿಮ್ಮ ಬಂಡಾಯ ಸಂಘಟನೆಯನ್ನು, ಸಂಘಟನೆಯ ನಾಯಕರನ್ನು ಟೀಕಿಸಿ ಪತ್ರಿಕೆ ತರುತ್ತಿದ್ದೇವೆ. ವ್ಯಕ್ತಿ ಸ್ವಾತಂತ್ರ್ಯ, ಅಭಿವ್ಯಕ್ತಿ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯದಲ್ಲಿ ನಂಬಿಕೆ ಇದ್ದರೆ ಚಂದಾ ಕಳಿಸಿರಿ"

ಹೇಗಿದೆ ಪಟ್ಟು ? ಚಂದಾ ಕೊಟ್ಟರೂ ಪೆಟ್ಟು, ಕೊಡದಿದ್ದರೂ ಪೆಟ್ಟು. ಏನು ಉತ್ತರ ಬರೆಯಲಿ, ದಯವಿಟ್ಟು ಹೇಳಿ. ●

---



---

## ರೇವಣಸಿದ್ಧ ಪೂಜಾರ

# ಅಜ್ಜ ಹೊಲಿದ ಕೌದಿ

ನಮ್ಮಜ್ಜ ಒಂದು ಕೌದಿ ಹೊಲಿದ,
ಅಪ್ಪನ, ಅವರಪ್ಪನವ್ವನ ಹರಕು
ಸೀರೆ–ಕುಪ್ಪಸಗಳ ಚಿಂದಿ ಜೋಡಿಸಿದ.
ಚಾಳೀಸಿನೊಳಗಿಂದ ದಿಟ್ಟಿಸುತ್ತಾ,
ತನ್ನ ನರಗಳನ್ನೇ ದಾರವಮಾಡಿ
ಶತಮಾನಗಳ ಕನಸುಗಳ ಹೆಣೆದ.

*

ಉತ್ತರಕೆ ಹಿಮಾಲಯ, ಪಶ್ಚಿಮಕೆ ವಿಂಧ್ಯ–ಸಹ್ಯಾದ್ರಿಯ,
ಇಕ್ಕೆಲಗಳಲಿ ನೀರಿನಾಗರಗಳ ಚಿತ್ರ ಬಿಡಿಸಿದ;
ಪಂಜಾಬ–ಸಿಂಧ–ಗುಜರಾತ-ಮರಾಠಾ
ದ್ರಾವಿಡ–ಉತ್ಕಲ-ವಂಗ ಹದಿನಾರು ಬಣ್ಣಗಳ ಸಂಘ
ಕಣ್ಣು-ಕಿವಿ-ಬಾಯ್ಮುಚ್ಚಿಕೊಂಡ ಮಂಗ,

*

ಅಜ್ಜ ಹೋದ ಮೇಲೆ ಮಾರ್–
ಸ(ರ)ದಾರರು ಜಗ್ಗತೊಡಗಿದರು ದಶದಿಕ್ಕಿಗೆ.
ಹಿಗ್ಗಬಲ್ಲದೆ ಈ ಮಣ್ಣ ಕೌದಿ ?
ಹೊರಗೆ ಕಂಗೊಳಿಸುವ ಸಸ್ಯಶಾಮಲೆ
ಅಂತರಂಗದಲಿ ಪಿಸಿಯತೊಡಗಿದಳು ಕುಸಿಯತೊಡಗಿದಳು,
ಗಂಗಾ-ಕಾವೇರಿಯಲಿ ಕೀವು-ರಕ್ತ ಉಕ್ಕತೊಡಗಿದಳು.

*

ಅಜ್ಜ ಬದುಕಿದ್ದರೆ ಇದಕೆ ಹೊಸಬಟ್ಟೆ ತೊಡಿಸುತಿದ್ದ
ಇಲ್ಲವೆ ಆತ್ಮಹತ್ಯೆಗೆ ಶರಣಾಗುತಿದ್ದ,
ಅಂಜುಬುರುಕ ಮೊಮ್ಮಕ್ಕಳು ಹುಡುಕಿದ್ದೇವೆ ಅವನ
ಹಳೇ ಟೊಪ್ಪಿಗೆ;

ಬರುವಿರಾ ಉಕ್ಕುವ ಸಾಗರಕೆ ಕಟ್ಟೆ ಕಟ್ಟಲು,[1]
ಮಾನವ–ಗೋಡೆ ನಿರ್ಮಿಸಿ ನಾಡ ತೇಲಿಸಲು,
ಹೇಳ್ರಿ ಗೆಳೆಯರೇ, ವೇಳೆಯಿಲ್ಲ ಹರಟಲು, ವೇಳೆಯಿಲ್ಲ
ಹರಟಲು. ●

**ಪ್ರಕಾಶ ಜಿ. ಕಾಳಗಿ**

## ಬಿಜಾಪುರ

ಬಿಜಾಪುರ ಅಂದರೆ
ಗೋಳಗುಮ್ಮಟ, ಅಂದರೆ
ಹೆಣ್ಣಿನ ಶೋಷಣೆಯ ಇನ್ನೊಂದು ಮುಖ.

ಕನ್ನಡ ಶಾಲೆಯತ್ತ ನಿರ್ಲಿಪ್ತ
ನೋಟ ಬೀರುವ ಗಾಂಧಿ
ಬ್ರ್ಯಾಂಡಿ ಶಾಪಿಗೆ 'ಅಲ್ಲೇ ನಿಲ್ಲು'
ಎನ್ನುತ್ತ ದೂಳು ತಿನ್ನುವ ಬಸವಣ್ಣ
ಎಂಟಿಫೇಮಿನನತ್ತ ನೋಡಿ
ನೋಡಿ ಕಣ್ಣು ಮಂಜಾಗಿ
ಕಾಲು ಜೋಮು ಹಿಡಿದಿರುವ ಅಂಬೇಡಕರ....
ವಿವಿಧ ಪಕ್ಷಗಳ ಘೋಷಣೆ
ಆಶ್ವಾಸನೆಗಳ ಬಿತ್ತಿಪತ್ರಗಳಲ್ಲಿ
ಸಿಕ್ಕು ನರಳುತ್ತಿದ್ದಾರೆ.

ಇಲ್ಲಿ ಆತ್ಮ ಹತ್ಯೆಗೆ
ಉಪ್ಪಲಿ ಬುರುಜ ಇದೆ
ಬಟ್ಟೆ ತೊಳೆಯಲು
ಬಾಂದ ಬಾವಡಿ-ತಾಜಬಾವಡಿ
ಇದೆ ದುಂಡು ಮೇಜಿನ ಪರಿಷತ್ತಿಗೆ
ಗಗನಮಹಲ್ ಸೋಮಾರಿಗಳಿಗೆ
ಬಾರಾ ಕಮಾನಗಳಿವೆ

ಇಲ್ಲಿನ ಪ್ರತಿನಿಧಿಗಳು;
ಒಬ್ಬ ಸಾಂಬ ಸದಾಶಿವ
ಇನ್ನೊಬ್ಬ ಓಂ ನಮಃ ಶಿವಾಯ

ಇಲ್ಲಿಯು ಜನ
'ರಾತ್ರಿ ಲೈಟಿಲ್ಲ' ಇರಲಿ
ಹಗಲಾದರೂ ಇರುತ್ತಲ್ಲ
'ನಾಲ್ಕು ದಿನ ನೀರಿಲ್ಲ'
ಇರಲಿ ಬಿಡಿ
'ಎಂಟು ದಿನ ನೀರು ಬರಲ್ಲ'
ಪರವಾಗಿಲ್ಲ ಆಮೇಲಾದ್ರು ಬರುತ್ತಲ್ಲ

ಹದಿನೈದಂ ದಿನ ಇಲ್ಲವೆಂದಾಗ
ಗುಂಪುಗೂಡುತ್ತಾರೆ ಚೀರುತ್ತಾರೆ
ಬಸ್ಸುಗಳ ತಡೆಯುತ್ತಾರೆ

ಮೂಲೆ ಕಂಡಲ್ಲಿ ಮೂತ್ರಿಸುವ
ಗೋಡೆ ಕಂಡಲ್ಲಿ ಉಗುಳುವ ಜನ
ನೀರು ಬಂತೆಂದರೆ ಎಲ್ಲ
ಮರೆತು ಓಡುತ್ತಾರೆ.

**ಶಿವಾನಂದ ಸಾಗನೂರ**

---

## ಅನುಕೂಲವಾದಿ

ಅವರು ಹೇಳುವರು:
ಮೀನು ತಿಂದರೂ ಶಾಖಾಹಾರಿ.
ಇವರು ಹೇಳುವರು:
ಬಳಸಿಯೂ ಬ್ರಹ್ಮಚಾರಿ.

ಅವರಿವರು ಹೇಳುವರು:
ಹೆಂಡ ಕುಡಿದರೂ ಗಾಂಧಿವಾದಿ,
ಹಾಗೆಯೇ ಬಂಗಾರಪ್ಪ ಹೇಳುತ್ತಾರೆ:
ಕಿರೀಟ ಧರಿಸಿದರೂ ಸಮಾಜವಾದಿ.

# ಪಕ್ಷನಿಷ್ಠೆ ಮತ್ತು ಸಮಾಜವಾದ

ಜಿ. ರಾಜಶೇಖರ

ಸಂಕ್ರಮಣದ ೧೯೯೨ ಜೂನ್-ಜುಲೈ ಸಂಚಿಕೆಯಲ್ಲಿ ಗೆಳೆಯ ಫಣಿರಾಜ ನನ್ನ ಮೇಲೆ ತಪ್ಪು ಹೊರಿಸಿ ಲೇಖನ ಬರೆದಿದ್ದಾರೆ (ಪುಟ ೪೫-೫೬). ಈ ಪ್ರತಿಕ್ರಿಯೆ, ಅವರ ವಾದಕ್ಕೆ ನನ್ನ ಪ್ರತಿವಾದವಲ್ಲ. ಗೆಲ್ಲುವುದಕ್ಕಾಗಿಯೇ ಫಣಿರಾಜ ವಾದ ಮಾಡುವುದಾದರೆ, ನಾನು ಈಗಿಂದೀಗ ಅವರಿಗೆ ಜಯ ಪತ್ರ ಬರೆದು ಕೊಡಲು ಸಿದ್ಧನಿದ್ದೇನೆ. ಅವರ ಹುರುಪು ಮತ್ತು ಅವರು ವಹಿಸಿಕೊಂಡು ಮಾತಾಡುವ ಪಕ್ಷದ ಸದ್ಯದ ಸ್ಥಿತಿ, ಎರಡೂ ನನಗೆ ಶಾಸ್ತ್ರ ಗ್ರಂಥಗಳನ್ನು ಪುಂಖಾನುಪುಂಖವಾಗಿ ಉದ್ಧರಿಸಿ ವಾದ ಹಾಕುವ ಬ್ರಾಹ್ಮಣ ಪಂಡಿತರನ್ನು ನೆನಪಿಗೆ ತರುತ್ತವೆ. ಶಂಕರ ವಿಜಯ, ಮಧ್ವ ವಿಜಯಗಳ ಹಾಗೆ ಮಾರ್ಕ್ಸ್ ವಿಜಯವನ್ನೂ ಸ್ಥಾಪಿಸ ಬಯಸುವ ಫಣಿರಾಜರ ಉತ್ಸಾಹಕ್ಕೆ ನಾನು ಅಡ್ಡ ಬರುವುದಿಲ್ಲ.

ಫಣಿರಾಜರ ಜೊತೆ ರಾಜಕೀಯ ಚರ್ಚೆ ಮಾಡಲು ನನಗೂ ಅವರಿಗೂ ಒಂದು ಸಮಾನ ಭಾಷೆಯೇ ಇಲ್ಲ: ಅಂದರೆ ನಾವು ಇಬ್ಬರೂ ಬಳಸುವ-ಶಬ್ದಗಳಿಗೆ ನಾವು ಆರೋಪಿಸುವ ಅರ್ಥ ಒಂದೇ ಅಲ್ಲ. ಹೀಗಾಗಿ ನಮ್ಮ ನಡುವೆ ವಾಗ್ವಾದಕ್ಕೆ ಅಗತ್ಯವಾದ ಸಮಾನ ನೆಲೆಯೇ ಇಲ್ಲ. "ಸಮಾಜವಾದಿ" ಎಂದು ತಮ್ಮನ್ನು ತಾವೇ ಕರೆದುಕೊಳ್ಳುತ್ತಿದ್ದ ದೇಶಗಳ ಪ್ರಸಕ್ತ ವಿದ್ಯಮಾನಗಳನ್ನು ಸೋಲು, ಕುಸಿತ, ಹಿನ್ನಡೆ ಇತ್ಯಾದಿ ಶಬ್ದಗಳಲ್ಲಿ ವರ್ಣಿಸುವುದು ನಮ್ಮನ್ನು ಹಾದಿ ತಪ್ಪಿಸಬಲ್ಲದು. ಆಟ, ಜೂಜು ಮತ್ತು ಯುದ್ಧದ ಅಂತಿಮ ಪರಿಣಾಮಗಳನ್ನು - ಸೋಲು, ಗೆಲುವು ಅಥವಾ ಮುನ್ನಡೆ ಹಿನ್ನಡೆ– ಈ ಶಬ್ದಗಳಲ್ಲಿ ಸಮರ್ಪಕವಾಗಿ ವರ್ಣಿಸಬಹುದು. ಹಾಗೆಯೇ 'ಕುಸಿತ' ಎನ್ನುವುದು ಒಂದು ಎತ್ತರವನ್ನೂ, ಅದಕ್ಕಿಂತ ಕೆಳಗಿನ ಒಂದು ಮಟ್ಟವನ್ನೂ ಸೂಚಿಸುತ್ತದೆ. ಪೂರ್ವ ಯುರೋಪ್ ಮತ್ತು ರಷ್ಯದ ಬೆಳವಣಿಗೆಗಳು "ಸೋಲು" ಎಂದಾದರೆ ಅಲ್ಲಿ ಸೋತವರು ಯಾರು ? ಗೆದ್ದವರು ಯಾರು ? ಸೋತವರು ಕಳೆದುಕೊಂಡದ್ದು ಏನನ್ನು ? ಗೆದ್ದವರು ಗಳಿಸಿದ್ದು ಏನನ್ನು ? ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷದವರ ಬಳಿ ಈ ಪ್ರಶ್ನೆಗಳಿಗೆಲ್ಲ ಖಡಾಖಂಡಿತವಾದ ಉತ್ತರವಿದೆ, ಎಪ್ಪತ್ತು ವರ್ಷಗಳ ಸಮಾಜವಾದಿ ಆಳ್ವಿಕೆಯ ಸಾಧನೆಗಳು, ಉಚಿತ

ಶಿಕ್ಷಣ, ವಸತಿ, ವೈದ್ಯಕೀಯ, ಎಲ್ಲರಿಗೆ ಉದ್ಯೋಗ, ಸಮಾನತೆ-ಇತ್ಯಾದಿ ಗುಣಗಾನದಿಂದ "ವಾಸ್ತವದಲ್ಲಿ ಇರುವ ಸಮಾಜವಾದಿ ವ್ಯವಸ್ಥೆ"ಯ ಅವರ ಸಮರ್ಥನೆ ಪ್ರಾರಂಭವಾಗುತ್ತದೆ. ಆದರೆ ಇಷ್ಟೆಲ್ಲ ಇದ್ದೂ, ಆ ವ್ಯವಸ್ಥೆಯನ್ನು ಜನ ಯಾಕೆ ದ್ವೇಷಿಸತೊಡಗಿದರು ಎಂಬ ಪ್ರಶ್ನೆಗೆ ಮಾತ್ರ ಅವರ ಬಳಿ ಉತ್ತರವಿಲ್ಲ. ಪೂರ್ವ ಯುರೋಪು ಮತ್ತು ರಷ್ಯದ ಬೆಳವಣಿಗೆ, "ನಡು ರಾತ್ರಿಯ ದಂಗೆ"ಯ ಹಾಗೆ ಹಠಾತ್ತನೆ ಸಂಭವಿಸಿದ್ದೇನೂ ಅಲ್ಲ. ಹತ್ತು ಹದಿನೈದು ವರ್ಷಗಳಷ್ಟು ಸುದೀರ್ಘ ಕಾಲದ ಜನರ ಆಂದೋಲನ ಮತ್ತು ರಾಜಕೀಯ ಸ್ಥಿತ್ಯಂತರದ ಪ್ರಕ್ರಿಯೆ ಅದು. ಅಲ್ಲದೆ ಅಂತಹ ಇತರ ರಾಜಕೀಯ ಪಲ್ಲಟಗಳಿಗೆ ಹೋಲಿಸಿದರೆ, ಇದು ಅಹಿಂಸಾತ್ಮಕವಾಗಿತ್ತು. ಫಣಿರಾಜ ಈ ಅಂಶಗಳನ್ನೆಲ್ಲ ಗಮನಿಸುವುದೇ ಇಲ್ಲ. ಯಾವ ಸನ್ನಿವೇಶದಲ್ಲಿ ರುಮೇನಿಯದ ಚೌಸೆಸ್ಕು ಅಂತಹವರು ಕಮ್ಯೂನಿಸ್ಟ್ ಪಕ್ಷದ ನಾಯಕರಾಗುತ್ತಾರೆ ? ಚೀನಾದಲ್ಲಿ ಟಿಯನ್ ಅನ್‌ಮನ್ ಚೌಕದ ಘಟನೆಗಳು ಯಾಕೆ ನಡೆದವು ? ಅಥವಾ ೧೯೯೧ರ ಆಗಸ್ಟ್‌ನಲ್ಲಿ ಗೊರ್ಬಚೇವ್ ವಿರುದ್ಧ ದಂಗೆ ಎದ್ದ ರಷ್ಯದ ಕಮ್ಯುನಿಸ್ಟ್ ನಾಯಕರಿಗೆ ಯಾಕೆ ಜನ ಬೆಂಬಲವಿರಲಿಲ್ಲ ? ಈ ಪ್ರಶ್ನೆಗಳೂ ಫಣಿರಾಜರನ್ನು ಬಾಧಿಸುವುದಿಲ್ಲ. ಬಂಡೆಕಲ್ಲಿನಂತೆ ಅಚಲವಾದ ಅವರ ಈ ಪಕ್ಷನಿಷ್ಠೆಯ ವಿರುದ್ಧ ಸಾಕ್ಷ್ಯಾಧಾರಗಳನ್ನು ಆಧರಿಸಿದ ವಾದ ಸಾಧ್ಯವಿಲ್ಲ. ಈ ದೃಷ್ಟಿಯಿಂದ ನೋಡಿದರೆ ಫಣಿರಾಜರ ನಿಷ್ಠೆಗೂ, ಧಾರ್ಮಿಕ ಮೂಲಭೂತವಾದೀ ನಿಷ್ಠೆಗೂ ವ್ಯತ್ಯಾಸವೇ ಇಲ್ಲ. ಸಮಾಜವಾದಿ ಜಗತ್ತಿನ ಹಿನ್ನಡೆ ಅಥವಾ ದೌರ್ಬಲ್ಯ 'ತಾತ್ಕಾಲಿಕ ಮತ್ತು ಬದಲಾಗುವಂತಹದ್ದು' ಎಂದು ಫಣಿರಾಜ ಭವಿಷ್ಯ ಹೇಳುವುದು ಕೂಡ ಹಸ್ತಸಾಮುದ್ರಿಕ, ಗಿಳಿ ಶಕುನಗಳಿಗಿಂತ ಹೆಚ್ಚು ಖಾತ್ರಿಯದಾದದ್ದಲ್ಲ.

ಫಣಿರಾಜರ ಲೇಖನದಲ್ಲಿ ಗೃಹೀತವಾಗಿರುವ ಒಂದು ಅಂಶವೆಂದರೆ ಮಾರ್ಕ್ಸ್‌ವಾದವೆನ್ನುವುದು ಈಗ ಒಂದು ಮಾತು ಕೂಡಿಸುವದಕ್ಕಾಗಲೀ, ಕಳೆಯುವದಕ್ಕಾಗಲೀ ಸಾಧ್ಯವಿಲ್ಲದಂತೆ ಪರಿಪೂರ್ಣವಾಗಿರುವ ಮತ್ತು ಆ ರೂಪದಲ್ಲೇ ನಮಗೆ ಸದಾ ದೊರೆಯುವ ತತ್ವ. ಫಣಿರಾಜರಿಗೆ ಮಾರ್ಕ್ಸ್‌ವಾದವೇ ಒಂದು ಮತವಾಗಿದೆ. ಆದರೆ ಮಾರ್ಕ್ಸ್‌ವಾದ ಪೂರ್ಣಗೊಂಡದ್ದು ಮತ್ತು ಪ್ರಶ್ನಾತೀತವಾದದ್ದು ಎನ್ನುವ ನಿಲುವು ಮಾರ್ಕ್ಸ್‌ವಾದದ ಅಂತಸ್ಸತ್ವಕ್ಕೆ ವಿರೋಧಿಯಾಗಿದೆ. ಮಾರ್ಕ್ಸ್‌ವಾದ ಅಪೌರುಷೇಯವಲ್ಲ; ಪರಿಪೂರ್ಣವೂ ಅಲ್ಲ. ಮಾರ್ಕ್ಸ್ ಮತ್ತು ಎಂಗೆಲ್ಸ್‌ರ ನಂತರ, ಹಲವು ಧೀಮಂತರು ಆ ಚಿಂತನೆಗೆ ಹೊಸ ಆಯಾಮಗಳನ್ನೂ ಹೊಸ ದೃಷ್ಟಿಕೋನಗಳನ್ನೂ ಒದಗಿಸಿದ್ದಾರೆ. ಅವನ್ನೆಲ್ಲ ಇಲ್ಲಿ ಚರ್ಚಿಸುವ ಅಗತ್ಯವಿಲ್ಲ. ಆದರೆ ಒಂದು ಮುಖ್ಯ ಸಂಗತಿಯನ್ನು ನಾವು ಮರೆಯಕೂಡದು; ಮಾರ್ಕ್ಸ್‌ನ ನಂತರ, ಮಾರ್ಕ್ಸ್‌ವಾದಿ ಪ್ರತಿಪಾದನೆಗಳಿಗೆ ತಮ್ಮದೇ

ಆದ ವಿಶಿಷ್ಟ ಕೊಡುಗೆ ನೀಡಿದ ಎಲ್ಲರನ್ನೂ ಕಮ್ಯುನಿಸ್ಟ್ ಪಕ್ಷಗಳು ಸಂಶಯ, ಅಸಹನೆ, ತಿರಸ್ಕಾರಗಳಿಂದ ಕಂಡಿವೆ.

ಸ್ಟಾಲಿನ್‌ನ ಅತ್ಯಾಚಾರಗಳನ್ನು, ತನ್ನ ಲೇಖನದಲ್ಲಿ ಫಣಿರಾಜ "ಪಕ್ಷದ ದೌರ್ಬಲ್ಯ ಮತ್ತು ಪಕ್ಷದ ಮಿತಿ" ಎಂದು ವರ್ಣಿಸುತ್ತಾರೆ. ಆ ಬಗ್ಗೆ ತಲೆಕೆಡಿಸಿಕೊಳ್ಳುವುದು, ಅವರ ಪ್ರಕಾರ, "ಪಕ್ಷದ ಸಂಘಟನಾ ವಹಿವಾಟುಗಳ ಅಜ್ಞಾನ" (ಪುಟ ೪೭). ಸ್ಟಾಲಿನ್ ಆಳ್ವಿಕೆಯನ್ನು ವಿರೋಧಿಸುವವರು ಲಕ್ಷಾಂತರ ಜನರ ಕಗ್ಗೊಲೆ, ಕೂಡು ದೊಡ್ಡಿಯ ಶಿಬಿರಗಳು, ಅಣಕು ವಿಚಾರಣೆಗಳು ಮತ್ತು ಗಡೀಪಾರುಗಳ ಖಚಿತ ಉದಾಹರಣೆಗಳನ್ನು ಕೊಡುತ್ತಾರೆ. ಅದಕ್ಕೆ ಪ್ರತಿಯಾಗಿ ಫಣಿರಾಜರಂತಹವರು "ಪಕ್ಷದ ದೌರ್ಬಲ್ಯ, ಸಂಘಟನೆಯ ನ್ಯೂನತೆ, ಸಮಾಜವಾದಿ ಕಾನೂನಿನ ತಿರುಚುವಿಕೆ, ವ್ಯಕ್ತಿ ಪೂಜೆಯ ಅತಿರೇಕ" ಇತ್ಯಾದಿ ಆರ್ವೆಲ್‌ನ ಡಬಲ್ ಸ್ಪೀಕ್ ನುಡಿಗಟ್ಟುಗಳಲ್ಲಿ ಪ್ರಭುತ್ವದ ಕ್ರೌರ್ಯವನ್ನು ತೇಲಿಸಿಬಿಡಲು ಯತ್ನಿಸುತ್ತಾರೆ. ಹಾಗೆಯೇ ಅವರು ಈ ತಪ್ಪುಗಳನ್ನು ವಿಮರ್ಶೆ ಸ್ವವಿಮರ್ಶೆಗಳಿಂದ ಸರಿಪಡಿಸಿಕೊಳ್ಳುವ ಭರವಸೆಯನ್ನೂ ಎಗ್ಗಿಲ್ಲದೆ ಕೊಡುತ್ತಾರೆ. ಆದರೆ ಹತ್ತಿರ ಹತ್ತಿರ ೫ ಲಕ್ಷ ರಾಜಕೀಯ ಕೊಲೆಗಳನ್ನು, ೫೦ ಲಕ್ಷ ಜನರ ಸೆರೆಯನ್ನು, ೩ ಕೋಟಿ ಜನರ ಬಲಾತ್ಕಾರದ ಸ್ಥಳಾಂತರವನ್ನು ಮತ್ತು ಇತರ ಅತ್ಯಾಚಾರಗಳನ್ನು "ಸರಿಪಡಿಸಿಕೊಳ್ಳುವದು" ಹೇಗೆ ? ಆ ಪ್ರಮಾಣದ ಯಾತನೆಯನ್ನು ಕಲ್ಪಿಸಿಕೊಳ್ಳುವದು ಕೂಡ ಕಷ್ಟ ಸಾಧ್ಯ. 'ಅದು ನಿಜವಿರಲಾರದು; ಇದ್ದರೂ ಸರ್ರಿಯಲ್ ಅರ್ಥದಲ್ಲಿ ಮಾತ್ರ ನಿಜವಿರಬಹುದು' ಎನ್ನಿಸುವಷ್ಟು ಅಗಾಧವಾದ ಈ ಸಾವು ನೋವನ್ನು ನಮ್ಮ ಅರಿವಿನ ತೆಕ್ಕೆಗೆ ತಂದುಕೊಳ್ಳುವದೇ ಒಂದು ನೈತಿಕ ಸಮಸ್ಯೆ. ಫಣಿರಾಜ, ಈ ವಿವರಗಳನ್ನು ಯಾಕೆ ನೆಟ್ಟ ಕಣ್ಣಿನಿಂದ ನೋಡಲಾರರು ? ಸ್ಟಾಲಿನ್‌ನ ಅತ್ಯಾಚಾರಗಳಿಗೂ, ಆತ ಮುಖ್ಯಸ್ಥನಾಗಿದ್ದ ರಾಜಕೀಯ ವ್ಯವಸ್ಥೆಗೂ ಇರುವ ಸಂಬಂಧದ ಪ್ರಶ್ನೆಗಳನ್ನೇ ಫಣಿರಾಜ ತಪ್ಪಿಸುತ್ತಿದ್ದಾರೆ. ಇದಕ್ಕೆ ಅವರು ಕೊಡುವ ಕಾರಣವೆಂದರೆ ಚರಿತ್ರೆಯ ಕುರಿತು ಕಾರ್ಮಿಕ ವರ್ಗದ ಅಂದರೆ ಕಮ್ಯುನಿಷ್ಟ ಪಕ್ಷದ ವ್ಯಾಖ್ಯಾನ, ಇತರರದ್ದಕ್ಕಿಂತ ಭಿನ್ನವಾಗಿರುತ್ತದೆ ಮತ್ತು ಅದೇ ಸರಿಯಾದದ್ದು. ಫಣಿರಾಜರ ಈ ಧೋರಣೆಯ ಸತ್ಯಾಸತ್ಯತೆ ಏನೇ ಇರಲಿ, ಅವರ ಪಕ್ಷನಿಷ್ಠೆಗಂತೂ 'ಶಹಬ್ಬಾಸ್' ಎನ್ನಲೇ ಬೇಕು!

ಫಣಿರಾಜರ ಲೇಖನದ ಶೀರ್ಷಿಕೆ, "ಕಮ್ಯುನಿಷ್ಟ ಪಕ್ಷ ಮತ್ತು ಬುದ್ಧಿಜೀವಿಗಳು" ಎಂದಿದೆ. ನನ್ನನ್ನು ಅವರು ಬುದ್ಧಿಜೀವಿಗಳ ಸಾಲಿಗೆ ಸೇರಿಸಿದ್ದಾರೆ. ಫಣಿರಾಜ, "ಬುದಿಜ್ಧೀವಿ" ಎನ್ನುವ ಪದ ಪ್ರಯೋಗವನ್ನು ಯಾವ ಅರ್ಥದಲ್ಲಿಯೇ ಮಾಡಿರಲಿ, ನಾನಂತೂ ಎಲ್ಲರೂ ಒಪ್ಪಿಕೊಂಡ ಅರ್ಥದ, "ಬುದ್ಧಿಜೀವಿ" ಅಲ್ಲ.

ಅಂಟೋನಿಯೋ ಗ್ರಾಮ್ಷಿ ಹೇಳುವ, "ಎಲ್ಲ ಮನುಷ್ಯರೂ ಬುದ್ಧಿಜೀವಿಗಳು" ಎನ್ನುವ ಅರ್ಥದಲ್ಲಾದರೆ ಮಾತ್ರ ನಾನೂ ಒಬ್ಬ ಬುದ್ಧಿಜೀವಿ. (ಮಾರ್ಕ್ಸ್‌ನ ನಂತರ ಮಾರ್ಕ್ಸ್‌ವಾದವನ್ನು ಬೆಳೆಸಿದ ಮಹಾನ್ ಚಿಂತಕ ಮತ್ತು ಹೋರಾಟಗಾರರಲ್ಲಿ ಗ್ರಾಮ್ಷಿ ಕೂಡ ಒಬ್ಬ. ಇವತ್ತಿಗೂ ಕಮ್ಯೂನಿಷ್ಟ ಪಕ್ಷಗಳಿಗೆ ಗ್ರಾಮ್ಷಿಯ ಚಿಂತನೆಗಳ ಬಗ್ಗೆ ಒಲವು ಇಲ್ಲ). ಫಣಿರಾಜ "ನನ್ನ ವಾದಗಳು" ಎಂದು ಹೆಸರಿಸುವ ವಾದಗಳೂ ನನ್ನವಲ್ಲ. ಕಳೆದ ಆರೇಳು ದಶಕಗಳಿಂದ, ಸಮಾಜವಾದಕ್ಕೆ ಬದ್ಧತೆ ಹೊಂದಿಯೂ, ಕಮ್ಯೂನಿಸ್ಟ್ ವ್ಯವಸ್ಥೆಯನ್ನು ಟೀಕಿಸಿದವರ ವಾದಗಳನ್ನೇ ನಾನು ಮತ್ತೆ ಹೇಳಿದ್ದೇನೆ. "ನನ್ನ ಮಾತು, ನನ್ನ ಅನಿಸಿಕೆ, ನನ್ನ ಭಾವನೆ, ನನ್ನ ಅನುಭವ" ಇತ್ಯಾದಿ ನುಡಿಗಟ್ಟುಗಳ ಏಕಸ್ವಾಮ್ಯವನ್ನು ನಾವು ಕನ್ನಡ ಕವಿಗಳಿಗೇ ಬಿಡುವುದು ಒಳ್ಳೆಯದು. ಇಂತಹ ವಿವಾದದಲ್ಲಂತೂ ಅವಕ್ಕೆ ಸ್ಥಾನವೇ ಇಲ್ಲ. ಡಿ. ಎಚ್. ಲಾರೆನ್ಸ್ ಬಹಳ ಹಿಂದೆಯೇ ಸೂಚಿಸಿರುವಂತೆ, ಪ್ರಚಾರ ಮಾಧ್ಯಮಗಳು ನಮ್ಮ ಮೂಲೆ ಮೂಲೆಯನ್ನೂ ಇಣುಕಿ ನೋಡುವ ಸನ್ನಿವೇಶದಲ್ಲಿ ನಾವು ಪ್ರೀತಿಸುವ ರೀತಿ ಕೂಡ ನಮಗೆ ವಿಶಿಷ್ಟವಾದದ್ದಲ್ಲ. ಅದು ಯಾವುದೋ ಮೂರನೆಯ ದರ್ಜೆಯ ಸಿನಿಮಾದ ನಕಲು ಆಗಿರುವ ಸಂಭವವೇ ಜಾಸ್ತಿ. ರಾಜಕೀಯ ಪ್ರತಿಪಾದನೆಯಲ್ಲಂತೂ, ನಮ್ಮ ಮನಸ್ಸುಗಳ ಮೇಲೆ ಯಜಮಾನಿಕೆ ಮಾಡುವವರ ಹಾವಳಿ ಇನ್ನೂ ಹೆಚ್ಚು. ಹೀಗಿರುತ್ತ ನನ್ನ ಮಾತು ನನ್ನ ಸ್ವಂತದ್ದು ಎಂದು ನಾನು ಹೇಳಿಕೊಳ್ಳಲಾರೆ. ಹಾಗೆಯೇ ಫಣಿರಾಜ ಬರೆದ ಮಾತುಗಳು ಕೂಡ ಅವರ ಸ್ವಂತದ್ದೇನೂ ಅಲ್ಲ. ಅವರ ಲೇಖನ, ಪ್ರಸಕ್ತ ರಾಜಕೀಯದ ಕುರಿತು ಮಾರ್ಕ್ಸ್‌ವಾದಿ ಕಮ್ಯೂನಿಷ್ಟ ಪಕ್ಷದ ಮದ್ರಾಸ್ ಅಧಿವೇಶನದ ಗೊತ್ತುವಳಿಯ ಒಂದು ಸಂಕ್ಷಿಪ್ತ ಆವೃತ್ತಿಯಾಗಿದೆ. ಆ ಗೊತ್ತುವಳಿಯ ಎಲ್ಲ ಅಂಶಗಳ ಪರಿಶೀಲನೆ ಇಲ್ಲಿ ಅವಶ್ಯವಿಲ್ಲ. ಆದರೆ ಆ ಪಕ್ಷ ತನ್ನ ಸದಸ್ಯರಿಂದಲೇ ಮರೆಮಾಚಿರುವ ಕೆಲವು ಸಂಗತಿಗಳ ಕುರಿತು ಇಲ್ಲಿ ಹೇಳಲೇಬೇಕಾಗಿದೆ.

೧ ಸ್ಟಾಲಿನ್ ಕೆಲವು ತಪ್ಪುಗಳನ್ನು ಮಾಡಿದ ಎನ್ನುವುದನ್ನು ಮಾರ್ಕ್ಸ್‌ವಾದಿ ಕಮ್ಯೂನಿಸ್ಟ್ ಪಕ್ಷ ಒಪ್ಪಿಕೊಳ್ಳುತ್ತದೆ. ಆದರೆ ಆ ತಪ್ಪುಗಳು ಯಾವುವು? ಅವುಗಳ ಸ್ವರೂಪವೇನು? ಇತ್ಯಾದಿ ವಿವರಗಳ ಬಗ್ಗೆ ಅದು ಏನನ್ನೂ ಹೇಳುವುದಿಲ್ಲ, ಕಾರ್ಮಿಕರ ನಿರಂಕುಶ ಪ್ರಭುತ್ವ ಮತ್ತು ಕೇಂದ್ರೀಕೃತ ಪ್ರಜಾಸತ್ತೆಯ ಪರಿಕಲ್ಪನೆಗಳಿಗೂ ಈ ಅತ್ಯಾಚಾರಗಳಿಗೂ ನಡುವೆ ಇರುವ ಸಂಬಂಧವನ್ನು ಪಕ್ಷ ಮರೆಮಾಡುತ್ತಿದೆ.

೨ ಸ್ಟಾಲಿನ್ ಆಳ್ವಿಕೆಗೂ, ನಾಝಿಗಳ ವಿರುದ್ಧ ರಷ್ಯ ನಡೆಸಿದ ಹೋರಾಟಕ್ಕೂ ತಳಕು ಹಾಕುವ ಪ್ರಯತ್ನವೂ ಮೇಲೆ ಹೇಳಿದ ನಿರ್ಣಯದಲ್ಲಿದೆ. ನಾಝಿ

ಗಳನ್ನು ಎದುರಿಸಲು ಆ ರೀತಿಯ ಆಳ್ವಿಕೆ ಅವಶ್ಯವಿತ್ತು ಅಥವಾ ಅನಿವಾರ್ಯವಾಗಿತ್ತು: ಅದು ಹೇಗಿದ್ದರೂ ಯುದ್ಧದಲ್ಲಿ ನಾಝಿಗಳನ್ನು ಸೋಲಿಸುವ ಮಹತ್ತರವಾದ ಗುರಿ ಸಾಧನೆಯಲ್ಲಿ ಈ ಸಂಹತ್ಯೆ ಮುಂತಾದ್ದು ಸಾಪೇಕ್ಷವಾಗಿ ಅಷ್ಟು ಮುಖ್ಯವಲ್ಲ ಎಂದು ನಮ್ಮನ್ನು ನಂಬಿಸಲೂ ಆ ನಿರ್ಣಯ ಯತ್ನಿಸುತ್ತದೆ. ಫಣಿರಾಜ ಕೂಡ ಅದೇ ಧಾಟಿಯಲ್ಲಿ ಬರೆಯುತ್ತಾರೆ; ಉದಾ. "ಸಮಾಜವಾದಿ ರಷ್ಯ ಎರಡು ದಶಕಗಳಲ್ಲಿ ಅಪಾರ ಅಭಿವೃದ್ಧಿ ಸಾಧಿಸಿ ನಾಝಿಗಳನ್ನು ಎಣೆಯಿಲ್ಲದಂತೆ ಎದುರಿಸಿ ಜಯ ಗಳಿಸಿದ ನಂತರ ಈ ಸ್ಟಾಲಿನ್‌ರ ಕ್ರೂರ ಕಾಲ ಬಂತು ಎಂಬುದನ್ನು ಗಮನಿಸಿದರೆ, ಈ ಬೆಳವಣಿಗೆಗಳ ಅವಶ್ಯಕತೆಯಾಗಿ ಸ್ಟಾಲಿನ್‌ರ ಕಾಲಘಟ್ಟ ಬಂತೆ ಎಂದು ಸಹಜವಾಗಿಯೇ ಮಾರ್ಕ್ಸ್‌ವಾದಿಗಳು ಪ್ರಶ್ನಿಸಿಕೊಳ್ಳಬೇಕು." (ಪುಟ ೫೨) ಫಣಿರಾಜರ ಈ ಮಾತಿನಲ್ಲಿ ಸ್ಟಾಲಿನ್ ಆಳ್ವಿಕೆಯ ಘಟನೆಗಳೆಲ್ಲ ಹಿಂದೆ ಮುಂದೆ ಆಗಿಬಿಟ್ಟಿವೆ! ಬೊಲ್ಸೆವಿಕ್ಕರ ಅಣಕು ವಿಚಾರಗಳು, ಕುಲಕ್ ರೈತಾಪಿವರ್ಗದ ನಿರ್ಮೂಲನ, ಪ್ರಜೆಗಳ ಸಾಮೂಹಿಕ ಕೂಡು ದೊಡ್ಡಿಗಳು, ಕೈಗಾರಿಕೀಕರಣ ಮತ್ತು ಮಹಾ ಯುದ್ಧದಲ್ಲಿ ರಷ್ಯ ಜರ್ಮನಿಯನ್ನು ಎದುರಿಸಿದ್ದು–ಇವು ನಡೆದ ವರ್ಷಗಳ ಬಗ್ಗೆ ಫಣಿರಾಜ ಇನ್ನಾದರೂ ಸರಿಯಾದ ಮಾಹಿತಿ ಪಡೆದುಕೊಳ್ಳಬೇಕು. ನಾಝಿಗಳನ್ನು ಎದುರಿಸಲು ಸ್ಟಾಲಿನ್‌ನ ಕ್ರೂರಸತ್ತೆ ಪ್ರಾರಂಭವಾದದ್ದಲ್ಲ. ಆತ ಅಧಿಕಾರಕ್ಕೆ ಏರಿದ ದಿನದಿಂದಲೆ, ಅದರ ಹಂತಗಳನ್ನು ಗುರುತಿಸಬಹುದು. ವಾಸ್ತವವಾಗಿ, ಯುದ್ಧ ಕಾಲದಲ್ಲಿ ಸರಕಾರಕ್ಕೆ ಎಲ್ಲ ಜನವರ್ಗಗಳ ಬೆಂಬಲ ಸಿಗುವಂತೆ ಮಾಡಲು ಸ್ಟಾಲಿನ್ ಹೆಚ್ಚು ಉದಾರವಾದ ಧೋರಣೆಗಳನ್ನು ಅನುಸರಿಸಿದ; ಜನರಲ್ಲಿ ದೇಶಪ್ರೇಮ ಪ್ರಚೋದಿಸಲು ರಷ್ಯದ ಆರ್ಥೊಡಾಕ್ಸ್ ಚರ್ಚಿಗೂ ಹೆಚ್ಚು ಸ್ವಾತಂತ್ರ್ಯ ನೀಡಿದ; ಬುದ್ಧಿಜೀವಿಗಳ ಮೇಲೆ ವಿಧಿಸಿದ್ದ ನಿರ್ಬಂಧಗಳನ್ನು ಸಡಿಲುಗೊಳಿಸಿದ. ಆದರೆ ಯುದ್ಧ ಮುಗಿದದ್ದೇ ಸ್ಟಾಲಿನ್ ಆಳ್ವಿಕೆ ಮೊದಲಿನಂತೆಯೇ ದಮನಕಾರಿಯಾಯಿತು.

೩ ನಾಝಿಗಳನ್ನು ಎದುರಿಸಿ, ಹಿಮ್ಮೆಟ್ಟಿಸಿದ ಹೆಗ್ಗಳಿಕೆ ನ್ಯಾಯವಾಗಿ ಇಡಿಯ ರಷ್ಯದ ಜನತೆಯದ್ದು; ಯುದ್ಧದಲ್ಲಿ ಅವರು ಮಾಡಿದ ತ್ಯಾಗ ಮತ್ತು ಅನುಭವಿಸಿದ ಸಾವು ನೋವು ಎಣೆ ಇಲ್ಲದ್ದು. ಅವರು ಇಷ್ಟು ದೊಡ್ಡ ಬೆಲೆ ತೆತ್ತು ಪಡೆದ ಯಶಸ್ಸನ್ನು ಸ್ಟಾಲಿನ್ ಒಬ್ಬನ ಕೊರಳಿಗೆ ಕಟ್ಟುವದು ಮಾರ್ಕ್ಸ್‌ವಾದಕ್ಕೆ ಬಗೆದ ದ್ರೋಹವಲ್ಲವೇ? ಚರಿತ್ರೆಯ ಎಲ್ಲ ಸಾಧನೆಗಳೂ ಜನತೆಯದ್ದು ಎನ್ನುವದು ಕಮ್ಯುನಿಸ್ಟರಿಗೆ ಗೊತ್ತಿಲ್ಲದ ಸತ್ಯವೇನೂ ಅಲ್ಲ.

ಆದರೆ ಸ್ಟಾಲಿನ್ ಆಳ್ವಿಕೆಯ ಉದ್ದೇಶರಹಿತ ಕ್ರೌರ್ಯಕ್ಕೆ ಒಂದು ಸಮಾಧಾನವಾಗಿ ಅವರು ಈ ಯಶಸ್ಸನ್ನು ಅವನ ಸಾಧನೆ ಎಂದು ಪ್ರಚಾರ ಮಾಡುತ್ತಾರೆ.

೪ ಸ್ಟಾಲಿನ್ ಕಾಲದಲ್ಲಿ ರಷ್ಯದಲ್ಲಿ ಆಯಿತು ಎಂದು ಹೇಳಲಾದ "ಅದ್ಭುತ ಕೈಗಾರಿಕಾ ಪ್ರಗತಿ" ಎನ್ನುವುದು ಅಬ್ಬರದ ಪ್ರಚಾರವಷ್ಟೇ ಆಗಿದ್ದು ಅಂತಹ ದೊಡ್ಡ ಸಾಧನೆ ಏನೂ ನಡೆಯಲಿಲ್ಲ ಎನ್ನುವ ಸತ್ಯವೂ ಈಗ ಬಹಿರಂಗವಾಗಿದೆ. ಸ್ಟಾಲಿನ್‌ನ ಅವಸರದ ಕೈಗಾರಿಕೀಕರಣದ ಫಲವಾಗಿ, ರಷ್ಯ ತನ್ನ ಅರ್ಥವ್ಯವಸ್ಥೆಯ ಅನೇಕ ವಲಯಗಳಲ್ಲಿ ಬಂಡವಾಳಶಾಹಿ ದೇಶಗಳಿಗಿಂತ ಹಿಂದೆ ಬಿದ್ದಿದೆ. ಇಡೀ ಜೀವ ಸಣಕಲಾಗಿ ಕಾಲು ಮಾತ್ರ ಬಾತುಕೊಂಡಿರುವ ಆನೆಕಾಲು ರೋಗಿಯಂತೆ ರಷ್ಯವೂ ಕೆಲವು ರಂಗಗಳಲ್ಲಿ ಮಾತ್ರ ಪ್ರಗತಿ ಸಾಧಿಸಿದೆ. ಆದರೆ ಈ ಕಿಂಚಿತ್ತು ಪ್ರಗತಿಗೆ ರಷ್ಯದ ಜನ ತೆತ್ತ ಬೆಲೆ ಯಾವುದು? ಸ್ಟಾಲಿನ್ ಕಾಲದ ಮತ್ತು ಆ ಮಾದರಿಯ ಕೈಗಾರಿಕೀಕರಣದಿಂದ ರಷ್ಯ ಮತ್ತು ಪೂರ್ವ ಯುರೋಪ್‌ಗಳಲ್ಲಿ ಆದ ಪರಿಸರ ನಾಶದ ಭಯಾನಕ ವಿವರಗಳೂ ಈಗ ಹೊರಬರುತ್ತಿವೆ. ಆದರೆ ಮಾರ್ಕ್ಸ್‌ವಾದಿ ಕಮ್ಯುಸಿಷ್ಟ ಪಕ್ಷ ಮಾತ್ರ ಏನೂ ಸಡೆದಿಲ್ಲವೆಂಬಂತೆ, ಈಗಲೂ ಸ್ಟಾಲಿನ್‌ನ ಜಡ ಆದರೆ ನಿರಂಕುಶ ಪ್ರಭುತ್ವದ ಮಾದರಿಯನ್ನೇ ಸಮರ್ಥಿಸುತ್ತಿದೆ. ೧೯೯೧ ರ ರಷ್ಯದ ವಿಫಲ ಕ್ರಾಂತಿಯ ನೇತಾರರಾದ ಯಾನಯೇವ್ ಮತ್ತು ಇತರ ಕಾಮ್ರೇಡುಗಳನ್ನು ಆ ಪಕ್ಷ ಹುತಾತ್ಮರೆಂದೇ ಪರಿಗಣಿಸುತ್ತದೆ. ಚೀನಾದ ಸರಕಾರ ಯುವಕರ ಪ್ರತಿಭಟನೆಯನ್ನು ಸೈನ್ಯದ ಮುಖಾಂತರ ಹತ್ತಿಕ್ಕಿದ್ದು ಸಮಾಜವಾದದ ರಕ್ಷಣೆಗೆ ಅಗತ್ಯವಾಗಿತ್ತು ಎಂದೇ ಅದು ಪ್ರತಿಪಾದಿಸುತ್ತದೆ. ರಷ್ಯದ 'ಹಾದಿ ತಪ್ಪಿದ' ಜನತೆಯ ಮಾತು ಹಾಗಿರಲಿ, ರಷ್ಯದ ಸೈನ್ಯ ಯಾಕೆ ಯಾನಯೇವ್ ಮತ್ತು ಕಂಪನಿಯ ಬೆಂಬಲಕ್ಕೆ ಬರಲಿಲ್ಲ ಎನ್ನುವುದೇ ಮಾರ್ಕ್ಸ್‌ವಾದಿ ಕಮ್ಯುನಿಷ್ಟ ಪಕ್ಷಕ್ಕೆ ಒಂದು ದೊಡ್ಡ ಸೋಜಿಗವಾಗಿದೆ. ಪೋಲಂಡು ಮತ್ತು ಹಂಗೆರಿಗಳ ಮೇಲೆ ರಷ್ಯ ನಡೆಸಿದ ಆಕ್ರಮಣಗಳನ್ನು ಈಗಲೂ ಆ ಪಕ್ಷ ಸಮರ್ಥಿಸುತ್ತದೆ, ಫಣಿರಾಜರ ವಾದಗಳ ತರ್ಕ ಮತ್ತು ಭಾಷೆಯ ಮೂಲ ಕೂಡ ಅದೇ ಪಕ್ಷ, ಅಥವಾ ಮಾನಸಿಕ ಸ್ಥಿತಿ. ನಾನು ಅವರ ವಾದಗಳನ್ನು ಮಾತ್ರವಲ್ಲ, ಭಾಷೆಯನ್ನು ಈ ರೀತಿ ಪಕ್ಷದ ಸುಳ್ಳುಗಳ ಪ್ರಚಾರಕ್ಕಾಗಿ ಅವರು ಬಳಸುವದನ್ನು ಕೂಡ ವಿರೋಧಿಸುತ್ತೇನೆ. ●

## ಕವನ ಬರೆಯೆಯಾ ಕಂಪ್ಯೂಟರ್: ಬಿ. ಎಸ್. ಚಂದ್ರಶೇಖರ

(ಗೆಳೆಯರ ಬಳಗ ಪ್ರಕಾಶನ, ಯಾದಗಿರಿ ೧೯೯೦)

ಬಿ. ಎಸ್. ಚಂದ್ರಶೇಖರ ಅವರು ತಮ್ಮ ಮೊದಲನೆಯ ಕವನ ಸಂಕಲನವನ್ನು ಪ್ರಕಟಿಸಿದ್ದಾರೆ. "ತಂತ್ರಜ್ಞಾನದ ಮಿತಿ ಮೀರಿದ ಪ್ರಭಾವಕ್ಕೆ ಒಳಗಾಗಿರುವ ಮನಸ್ಸುಗಳು ಕಾವ್ಯಕ್ಕೆ ಎಷ್ಟರ ಮಟ್ಟಿಗೆ ಸ್ಪಂದಿಸುತ್ತವೆ ಎಂಬುದು ಚರ್ಚಾರ್ಹ. ಆದರೂ ಈ ಯುಗದಲ್ಲೂ ಕಾವ್ಯಕ್ಕೆ ಒಂದು ಸ್ಥಾನವಿದೆಯೆಂದು ನಂಬುವ ವಿವೇಕಿಗಳ ಬೆನ್ನಿಗೆ ನನ್ನಂಥವರು ಇರುತ್ತಾರೆ," ಎಂದು ಚಂದ್ರಶೇಖರ ಅವರು ತಮ್ಮ ಕಾವ್ಯದ ರಚನೆಗೆ ಒಂದು ಗಂಭೀರ ತಿರುವು ಕೊಟ್ಟಿದ್ದಾರೆ. ಕಾವ್ಯ ಬರೆಯುವುದು ವಿವೇಕತನವೆ ? ಎಂಬ ಪ್ರಶ್ನೆಯನ್ನು ಈ ಹೇಳಿಕೆ ಮೂಡಿಸುತ್ತದೆಯಾದರೂ, ಈ ಮಾತುಗಳ ಹಿಂದಿನ ಗಂಭೀರತೆ ಬಿಟ್ಟುಕೊಡುವಂತದ್ದಲ್ಲ.

ಈ ಕಾಳಜಿಯೇ ಇಲ್ಲಿನ ಮುಖ್ಯ ಧೋರಣೆ ಅಲ್ಲ. ಉದಾಗೆ, 'ಮೊದಲ ಸಾಲು,' 'ಹಾಡು,' 'ತಾಯಿಯ ಜೋಗುಳ,' 'ನಿರರ್ಥಕ' 'ಕಾವ್ಯ ಮೂಡಬೇಕು' 'ನಾವು ಕವಿಗಳು.' ಈ ಕವಿತೆಗಳು, ಕಾವ್ಯದ ಬಗ್ಗೆ ಸಾಂಪ್ರದಾಯಿಕವಾಗಿರುವ ವಿಷಯಗಳ ಪುನರ್ ನಿರೂಪಣೆಯೇ ಆಗಿವೆ. ಇವುಗಳಿಗೆ ಹೋಲಿಸಿದಾಗ,

> ಚಿತ್ತ ಭಿತ್ತಿಯಲಿ ಮೆತ್ತಿಸಿದ ನೆನಪುಗಳ
> ಸುರುಳಿ ಬಿಡಿಸಿಟ್ಟು
> ಹೆತ್ತಮ್ಮನಿತ್ತ ಬುತ್ತಿ ಖಾಲಿಯಾಗುವವರೆಗೆ
> ಕವನ ಬರೆಯುವಿಯಾ ?

ಎಂದು ಕಂಪ್ಯೂಟರ್‌ಗೆ ಸವಾಲೆಸೆದರೂ, ಕೊನೆಗೆ ಕೈಗೊಳ್ಳುವ ತೀರ್ಮಾನ ಅಷ್ಟೊಂದು ಆಶಾದಾಯಕವಾಗಿಲ್ಲ–

> ಸ್ವತಃ ನೀನೆ ಕವಿಯಾಗಿ ಮೆರೆಯುವ ದಿನ ಬರಲಿ,
> ನಿನ್ನ ಬರಹ ಕಾವ್ಯವೆಂದು ಲೋಕವೆಲ್ಲ ನಂಬಲಿ,
> ಒಂದು ಮಾತಂತು ನಿಜ- ಪ್ರಿಯ ಗಣಕ ಬಂಧು–
> ನಿನ್ನದು ಕಾವ್ಯವಲ್ಲವೆಂಬ ಗುಮಾನಿ ಗಟ್ಟಿಯಾಗುವಂದು
> ಕವಿ ನಿರ್ಗಮಿಸಿರುತ್ತಾನೆ–ವಿಷಾದ ತಳೆದು.

ಇಲ್ಲಿನ ಆಲೋಚನೆಯಲ್ಲಿ ಕಂಡು ಬರುವ ದ್ವಂದ್ವ, ಈ ಕವಿತೆಯ ಆಶಯದ ಹೊರಗೆ ನಿಲ್ಲುತ್ತದೆ. ಆದರೂ ಕೊನೆಯ ಎರಡು ಸಾಲುಗಳಲ್ಲಿ ಕಂಪ್ಯೂಟರ್‌ನ ಬರಹ ಕಾವ್ಯವಲ್ಲವೆಂಬ ತೀರ್ಮಾನ ಗಟ್ಟಿಯಾಗಿರುವದಕ್ಕೂ, ಕವಿ ನಿರ್ಗಮಿಸುವುದಕ್ಕೂ ತಾಳೆ ಹಾಕುವ ರೀತಿಯಿಂದಾಗಿ ಕವಿತೆಯಲ್ಲಿ ವಿಷಾದ ಮಡುಗಟ್ಟುತ್ತದೆ.

ಇದೇ ಕವನದ ಶಕ್ತಿಯೂ ಆಗುತ್ತದೆ. ಈ ಬಗೆಯ ಅಂಚನ್ನು ಉಳಿಸಿಕೊಳ್ಳದೆ, ಸುಪರ್ ಕಂಡಕ್ಟರ್, ಭೋಳೆ ಮಾತುಗಳಿಂದ ಮುಕ್ತಾಯಗೊಳ್ಳುತ್ತದೆ-

ಅಧಿಕಾರಿ ಶ್ರೀಮಂತ ಶಿಲ್ಪಿ ಸಚಿವ ಯೋಜಕ
ಒಬ್ಬೊಬ್ಬನು ಆದಂದು ನಿರ್ವಿರೋಧ ವಾಹಕ
ಅವಿರೋಧ ವಹನ ಕ್ರಾಂತಿ ಅಂದು ಮಾತ್ರ ಸಾರ್ಥಕ!

ಇಡೀ ಸಂಕಲನದಲ್ಲಿ ನಿಜವಾಗಿ ಆಕರ್ಷಿಸುವ ಕವಿತೆಗಳೆಂದರೆ, 'ವೈವಿಧ್ಯ.' 'ಒಂಟಿ ಬದುಕು,' 'ಯಕ್ಷ ಪ್ರಶ್ನೆ', 'ಯಾವ ಶಿಕ್ಷೆ,' 'ಕುಣಿತ,' 'ಭ್ರೂಣಗಳು,' ಮತ್ತು ಅನುವಾದಿತ ಕವಿತೆ 'ವಿಪ್ಲವ ಗಾಯನ'. ಸಂಕೀರ್ಣತೆ, ಚಂದ್ರಶೇಖರ ಅವರ ಕಾವ್ಯದ ಎದ್ದು ಗುಣವಾದರೂ, 'ವಿಪ್ಲವ ಗಾಯನ'ದಂತಹ ಸರಳ ಕವಿತೆಯನ್ನು ಅವನು ಅನುವಾದಿಸಿರುವುದು ಗಮನಾರ್ಹ.

ಅಲಾರಮ್ಮಿನ ಗಡಿಯಾರದಲ್ಲಿ ಹೇಗೆ ಒಂದೊಂದಕ್ಕೆ ಒಂದೊಂದು ಆ್ಯಂಗಲ್ಲು ಎಂಬ ಮೂಲಕ ವ್ಯಕ್ತಿವಿಶಿಷ್ಟತೆ ಹೇಳುವ (?) ಕವನ 'ವೈವಿಧ್ಯ'ದ ಧಾಟಿಯನ್ನೇ

ನೀನಿದ್ದ ಮನೆಯಲ್ಲಿ ನೆನೆವವರಾರೂ ಇಲ್ಲ
ಅಷ್ಟೇ ಅಲ್ಲ-ಯಾರೂ ಬರಲಾರರು ಕೂಡ.
ಖಚಿತ ಪಡಿಸಿಕೊಳ್ಳಲು ಮಾತ್ರ ಮರೆಯ ಬೇಡ (ಒಂಟಿ ಬದುಕು)

ಎಂಬ ಮಾತು ಅನುರಣಿಸುತ್ತದೆಯೆ? ಅಲ್ಲದೆ ಬದುಕಿನ ಒಂಟಿತನವನ್ನೂ ದಾಖಲಿಸುತ್ತದೆ.

'ಯಕ್ಷಪ್ರಶ್ನೆ', 'ಕುಣಿತ'ಗಳಲ್ಲಿ ರಾಜಕೀಯ ವಿಡಂಬನೆ ಮೆಚ್ಚಬೇಕಾದ್ದು. ಮೂಲ ಯಕ್ಷಪ್ರಶ್ನೆಯಲ್ಲಿ ಕಾಣಿಸದ, 'ಪ್ರಜೆಗಳಿಗೆ ವನವಾಸ' ಎಂಬ ಮಾತು, 'ಯಕ್ಷ ಪ್ರಶ್ನೆ'ಯ ಇಂಗಿತವನ್ನೇ ಬದಲಾಯಿಸುತ್ತದೆ. 'ಯಾವ ಶಿಕ್ಷೆ'ಯ ಚೈತ್ರದ ಚಿತ್ರ, ಆಧುನಿಕ ಕಾಲದ ವಾಸ್ತವ ಹಿಡಿಯಲು ಯತ್ನಿಸಿದೆ.

ಈ ಎಲ್ಲ ಕವಿತೆಗಳನ್ನು ನೋಡಿದಾಗ, ಚಂದ್ರಶೇಖರ ಅವರು ತಮ್ಮ ಕವಿತೆಯ ನೆಲೆಯ ಬಗ್ಗೆ ಇನ್ನೂ ದೃಢವಾದ ನಿಲವನ್ನು ತಳೆಯಬೇಕಾಗಿದೆ. ಕಾವ್ಯಕ್ಷೇತ್ರದಲ್ಲಿ ತಕ್ಕಷ್ಟು ಪರಿಶ್ರಮ ಹಾಕಿರುವ ಚಂದ್ರಶೇಖರ ಅವರು ತಮ್ಮ ಮುಂದಿನ ದಾರಿಯನ್ನು ಸ್ಪಷ್ಟಗೊಳಿಸಿಕೊಂಡರೆ, ಅವರ ಕಾವ್ಯ ಯಶಸ್ಸಿನ ಹಾದಿ ಹಿಡಿಯುತ್ತದೆ ಎಂದು ಧಾರಾಳವಾಗಿ ಹೇಳಬಹುದು.

ವೇಣುಗೋಪಾಲ ಸೊರಬ

## ಈ ಸಂಚಿಕೆಯ ಲೇಖಕರು


**ಶಿವರಾಮಯ್ಯ** ೧೨೭, ೧೩ನೇ ಮೇನ್, ಬಿ. ಎಂ. ಲೇಔಟ, ವಿಜಯನಗರ, ಬೆಂಗಳೂರು ೫೬೦ ೦೪೦

**ಶಂಕರ ಕುಕನೂರ** ಬಿ. ಡಿ. ಓ. ಆಫೀಸು, ಮುಂಡರಗಿ ೫೮೨ ೧೧೮

**ಬಿ. ಪೀರ್‌ಬಾಷ** c/o ಎಚ್. ಶೇಷಗಿರಿರಾವ್, ಕೇಶವಗುಡಿ ಎದುರು, ಹೂವಿನ ಹಡಗಲಿ ೫೮೩೨೧೯

**ಡಾ. ಸಂಜೀವ ಕುಲಕರ್ಣಿ** ಮಲ್ಲಿಗೆ, ೧೯/೨, ಮಹಿಷಿ ರಸ್ತೆ, ಮಾಳಮಡ್ಡಿ, ಧಾರವಾಡ ೫೮೦ ೦೦೭

**ಸತ್ಯಾನಂದ ಪಾತ್ರೋಟ** ಕಾಳಿದಾಸ ಜ್ಯೂ. ಕಾಲೇಜು, ಬಾಗಲಕೋಟ ೫೮೭ ೧೦೧

**ಹೊರೆಯಾಲ ದೊರೆಸ್ವಾಮಿ** ೧೩೪೫, ೪ನೇ ಕ್ರಾಸ್, ಕೃಷ್ಣಮೂರ್ತಿಪುರಂ, ಮೈಸೂರು ೫೭೦ ೦೦೪

**ರೇವಣಸಿದ್ಧ ಪೂಜಾರ** ಗಿರಿಜಾ ಮಹಿಳಾ ಕಾಲೇಜು, ಸಿಂಧನೂರು ೫೮೪ ೧೨೮

**ಪ್ರಕಾಶ ಜಿ. ಕಾಳಗಿ** ಜೋರಾಪುರ ಪೇಟ, ಬಣಗಾರಗಲ್ಲಿ, ಬಿಜಾಪುರ ೫೮೬ ೧೦೧

**ಶಿವಾನಂದ ನಾಗನೂರ** ಜ್ಞಾನವಾಹಿನಿ, ಬಸವೇಶ್ವರನಗರ, ಹಾವೇರಿ ೫೮೧ ೧೧೦

**ಜಿ. ರಾಜಶೇಖರ** ವಿಭಾಗೀಯ ಕಚೇರಿ, ಎಲ್. ಐ. ಸಿ., ಉಡುಪಿ ೫೭೬ ೧೦೧


---


## ಸಂಕ್ರಮಣ ಪ್ರಕಾಶನ, ಧಾರವಾಡ–೫೮೦ ೦೦೮

# ಸಂಕ್ರಮಣ ಸಾಹಿತ್ಯ

ಸಂಪುಟ : ಒಂದು

ಸಂಪಾದಕ : ಚಂದ್ರಶೇಖರ ಪಾಟೀಲ

ಈ ಸಂಪುಟದ ಬೆಲೆ : ರೂ. ೪೦. (ಮೂರು ಸಂಪುಟಗಳ ಒಂದು ಸೆಟ್‌ಗಾಗಿ ಮುಂಗಡವಾಗಿ ರೂ. ೧೨೦ ಕಳಿಸಬಹುದು–ಡಿ.ಡಿ./ಎಂ. ಓ. ಮೂಲಕ ಮಾತ್ರ)

ಸಂಕ್ರಮಣ ಪ್ರಕಾಶನ, ಧಾರವಾಡ-೫೮೦ ೦೦೧



SANKRAMANA PRAKASHANA DHARWAD-580 001